# ಮುನ್ನುಡಿ

ಈ ಸಾಮಾಜಿಕ ನಾಟಕವನ್ನು ನಮ್ರತೆಯಿಂದ ಕನ್ನಡಿಗರಿಗೆ ಸಮರ್ಪಿಸಿದ್ದೇನೆ. ಬಾಲವಿಧವೆಯರ ಕಷ್ಟಗಳನ್ನೂ, ಹಲವು ಸಂದರ್ಭಗಳಲ್ಲಿ ಅವರಿಗಿರುವ ಹಿಂಸೆಗಳನ್ನೂ ಚಿತ್ರಿಸಲು ಈ ನಾಟಕವನ್ನು ಬರೆದಿದ್ದೇನೆ.

ಬೆಂಗಳೂರಿನಲ್ಲಿರುವ "ಜನರಲ್ ಅಂಡ್ ರೆವೆನ್ಯೂ ಸೆಕ್ರೆಟೇರಿಯಟ್ ಕ್ಲಬ್" ಸಂಘದವರು ನಿವೃತ್ತ ನ್ಯಾಯಾಧೀಶರಾದ ರಾಜಧರ್ಮಪ್ರವೀಣ ದಿವಾನ್ ಬಹದ್ದೂರ್ ಶ್ರೀಮಾನ್ ಕೆ. ಎಸ್. ಚಂದ್ರಶೇಖರ ಐಯರವರ ಅಧ್ಯಕ್ಷತೆಯಲ್ಲಿ ಇದನ್ನು ಸಭಿಕರು ಮೆಚ್ಚುವಂತೆ ಅಭಿನಯಿಸಿದುದಕ್ಕಾಗಿ ಅವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ.

ಈ ನಾಟಕವನ್ನು ನಾನು ಓದಿ ಹೇಳಿದಾಗಲೂ, ಈ ನಾಟಕದ ಅಭಿನಯವು ನಡೆದಾಗಲೂ ಪ್ರೀತ್ಯಾದರಗಳನ್ನು ವ್ಯಕ್ತಗೊಳಿಸಿ ತಮ್ಮ ಸಂತೋಷವನ್ನೂ ಮೆಚ್ಚುಗೆಯನ್ನೂ ಸೂಚಿಸಿದ ಹಿರಿಯರಿಗೂ ಮಿತ್ರರಿಗೂ ನಾನು ವಿಶೇಷ ಕೃತಜ್ಞನಾಗಿದ್ದೇನೆ. ಅವರಲ್ಲೊಬ್ಬರಾದ ಶ್ರೀಮಾನ್ ಎಸ್. ಜಿ. ಶಾಸ್ತ್ರಿಗಳವರು ಬದರಿಯನ್ನರೆದ ಹಾಡನ್ನು ನನಗೆ ದೊರೆಯಿಸಿದುದೇ ಮುಂತಾದ ರೀತಿಗಳಲ್ಲಿ ಉಪಕಾರಮಾಡಿದ್ದಾರೆ.

ಯಾರೊಬ್ಬರ ಮೇಲಿನ ಈರ್ಷ್ಯಾಸೂಯೆಗಳಿಂದಲೇ ಆಗಲಿ, ಅಥವಾ ಯಾವುದಾದರೂ ಒಂದು ಗುಂಪಿನವರನ್ನು ಅವಹೇಳನ ಮಾಡುವ ದುರುದ್ದೇಶದಿಂದಲೇ ಆಗಲಿ, ನಾನು ಈ ನಾಟಕವನ್ನು ಬರೆದಿಲ್ಲ. ಬಂಡೆಯಿಷ್ಟಿರುವುದನ್ನು ಬೆಟ್ಟದಷ್ಟು ಮಾಡಿ ತೋರಿಸುವುದಾಗಲಿ, ಅಥವಾ ಕುಹಕವಾಗಲಿ, ಅಥವಾ ವಿಡಂಬನದ ಕಟುಹಾಸ್ಯವಾಗಲಿ ನನ್ನ ಉದ್ದೇಶಗಳಲ್ಲ. ಸಹೃದಯರಾದವರು ಈ ಗ್ರಂಥವನ್ನು ಸಾವಧಾನವಾಗಿ ಓದಿ ನೋಡಿದರೆ ಈ ಅಂಶಗಳು ವ್ಯಕ್ತವಾಗದಿರವು. ವಿಧವೆಯರಿಗೆ ವಿಧಿಯು ಮಾಡಿರುವ ಅನ್ಯಾಯದ ಜೊತೆಗೆ ಸಮಾಜವೂ ಅನ್ಯಾಯ

ಮಾಡುತ್ತಿರುವುದಕ್ಕಾಗಿ ಮನನೊಂದು ಈ ನಾಟಕವನ್ನು ಬರೆದಿದ್ದೇನೆ. ಬೆಂಗಳೂರು ಮೈಸೂರು ನಗರಗಳಲ್ಲಿ ವಿಧವೆಯರಿಗೆ ಅಷ್ಟೇನೂ ಹೆಚ್ಚಿನ ಕಷ್ಟಗಳಿಲ್ಲದಿರಬಹುದು. ಆದರೆ ಇತರ (ಗ್ರಾಮಾಂತರ) ಪ್ರದೇಶಗಳಲ್ಲಿ ಅವರ ಕಷ್ಟಗಳನ್ನು ನೋಡಿದ ಕರುಣಾಳುಗಳಾರೂ ಕಂಬನಿದುಂಬದಿರಲಾರರು. ವಯಸ್ಸಾದ ವಿಧವೆಯರೇ ಅನೇಕ ಸಂದರ್ಭಗಳಲ್ಲಿ (ಸಕೇಶಿಯರಾದ) ಚಿಕ್ಕ ವಯಸ್ಸಿನ ವಿಧವೆಯರನ್ನು ತೊಂದರೆಪಡಿಸುವುದು ವಿಷಾದಕರವಾದ ಅಂಶ. ಆದರೆ ಎಲ್ಲ ವಿಧವೆಯರೂ ಹಾಗೆ ಮಾಡುವುದಿಲ್ಲವೆಂಬ ಅಂಶವೂ ಕೊನೆಯ ದೃಶ್ಯದಿಂದ ವ್ಯಕ್ತವಾಗುವುದು.

ಬೆಂಗಳೂರು,
೨೭–೩–೧೯೩೪.

ಸಿ. ಕೆ. ವೆಂಕಟರಾಮಯ್ಯ

———

# ಪಾತ್ರಗಳು

---

| | |
|---|---|
| ಸುಂದರಿ | ಚಿಕ್ಕವಯಸ್ಸಿನ ವಿಧವೆ |
| ರಾಮರಾಯ | ಸುಂದರಿಯ ತಂದೆ |
| ಶಾಮಣ್ಣ | ಸುಂದರಿಯ ಸೋದರಮಾವ (ತಾಯಿಯ ತಮ್ಮ) |
| ರಂಗು | ಶಾಮಣ್ಣನ ಮಗ |
| ವಿಶಾಲಾಕ್ಷಿ | ಶಾಮಣ್ಣನ ಮಗಳು |
| ಕಾವೇರಮ್ಮ | ಶಾಮಣ್ಣನ ಹೆಂಡತಿ |
| ಶ್ರೀಕಂಠಯ್ಯ | ಸುಂದರಿಯ ಅಣ್ಣ |
| ಸೀತಮ್ಮ | ರಾಮರಾಯನ ಎರಡನೆಯ ಹೆಂಡತಿ |
| ಲಕ್ಷ್ಮಮ್ಮ | ಅವಳ ತಾಯಿ (ಮಡಿಹೆಂಗಸು) |
| ಶೇಷಗಿರಿರಾಯ | ಶ್ರೀಕಂಠಯ್ಯನ ಮಾವ |
| ರಾಜಾರಾಯ<br>ಗೋವಿಂದಯ್ಯ<br>ನರಸಿಂಹಯ್ಯ | ಶ್ರೀಕಂಠಯ್ಯನ ಸ್ನೇಹಿತರು |
| ವೆಂಕಮ್ಮ | ಶ್ರೀಕಂಠಯ್ಯನ ಹೆಂಡತಿ |
| ಶಂಕರ | ಶ್ರೀಕಂಠಯ್ಯನ ಮಗ |
| ಶ್ರೀನಿವಾಸಯ್ಯ<br>(ಅಡ್ಡಹೆಸರು ಕುಂಭಕೋಣಂ) | ರಾಮರಾಯನಿಗೆ ದೂರದ ಅನುಬಂಧಿ |
| ರಾಜಮ್ಮ | ಶ್ರೀನಿವಾಸಯ್ಯನ ಹೆಂಡತಿ |
| ನೀಲಕಂಠಭಟ್ಟ | ಮಠಮುದ್ರೆ ಮತ್ತು ರಾಮರಾಯನ ಪುರೋಹಿತ |
| ನಾಗಾಜೋಯಿಸ | ವೈದಿಕ ಬ್ರಾಹ್ಮಣ |
| ಅಕ್ಕಯ್ಯಮ್ಮ | ನಾಗಾಜೋಯಿಸನ ಹೆಂಡತಿ |
| ಸುಬ್ಬಮ್ಮ | ಒಬ್ಬಳು ಮುತ್ತೈದೆ |
| ಹನುಮಂತಸೆಟ್ಟಿ | ಒಬ್ಬ ಸಾಹುಕಾರ |

ಸುಬ್ಬಲಕ್ಷ್ಮಿ
ಲಿಲ್ಲಿ } . . . . . . ಸಂಗೀತ ಕಲಿಯುವ ಹುಡುಗಿಯರು

ಜಾನಕಿ. . . . . . . . ಸುಂದರಿಯ ಸೇವಕಿ

ನಾಗೇಶ್ವರ ಐಯರ್ . . . . . ಬೆಂಗಳೂರಿನ ಸಾಂಕ್ರಾಮಿಕ ಜಾಡ್ಯಗಳ ಆಸ್ಪತ್ರೆಯ (ಇ. ಡಿ. ಹಾಸ್ಪಿಟಲ್) ಡಾಕ್ಟರ್

ಮುತ್ತೈದೆಯರು, ಮಿತ್ರಗೋಷ್ಠಿ, ಹರಿಕಥೆಗೆ ಹೋಗಿದ್ದವರ ಗುಂಪು, ಇತ್ಯಾದಿ.

## ದೃಶ್ಯಗಳು ನಡೆಯುವ ಸ್ಥಳಗಳು

ಮೊದಲಿನ ಕೆಲವು ದೃಶ್ಯಗಳು ರಾಮರಾಯನ ಊರಾದ ಹೋಬಳಿ ಕಸಬೆಯೊಂದರಲ್ಲಿ ನಡೆಯುವುವು. ಉಳಿದ ದೃಶ್ಯಗಳು ಬೆಂಗಳೂರಿನಲ್ಲಿ ನಡೆಯುವುವು.

---

## ಇದೇ ಗ್ರಂಥಕರ್ತನಿಂದ ರಚಿತವಾಗಿರುವ
## ಇತರ ಗ್ರಂಥಗಳು

---

| | |
|---|---|
| ಹಳ್ಳಿಯ ಕಥೆಗಳು . . . . | ೦–೮–೦ |
| ನಮ್ಮ ಸಮಾಜ (ಸಾಮಾಜಿಕ ನಾಟಕ) . . | ೧–೦–೦ |
| ಮಂಡೋದರಿ (ಪೌರಾಣಿಕ ನಾಟಕ) ಸಾದಾ ಪ್ರತಿ . | ೧–೦–೦ |
| ,, ಕ್ಯಾಲಿಕೋ ಪ್ರತಿ . | ೧–೮–೦ |
| ಪೈಗಂಬರ ಮಹಮ್ಮದನು . . . | ೧–೪–೦ |
| ಕಾಳಿದಾಸನು ಶೃಂಗಾರ ರಸವನ್ನು ಚಿತ್ರಿಸಿರುವ ಬಗೆ . . . . | ೪–೮–೦ |
| ತುರಾಯಿ (ಏಳು ಕಥೆಗಳ ಸಂಗ್ರಹ) . . | ೧–೦–೦ |
| ನಚಿಕೇತ (ಕಠೋಪನಿಷತ್ತಿನ ಕಥೆಯನ್ನವಲಂಬಿಸಿ ಬರೆದ ನಾಟಕ) . . . | ೧–೦–೦ |

"ನಮ್ಮ ಸಮಾಜ" ಎಂಬ ಗ್ರಂಥವನ್ನು "**ರಾಮ ಮೋಹನ ಕಂಪನಿ,** ಬಳೇಪೇಟೆ, ಬೆಂಗಳೂರು ಸಿಟಿ" ಎಂಬ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು. ಉಳಿದ ಗ್ರಂಥಗಳನ್ನು, "**ಸತ್ಯಶೋಧನ ಪುಸ್ತಕ ಭಂಡಾರ,** ಕೋಟೆ, ಬೆಂಗಳೂರು ಸಿಟಿ" ಎಂಬ ವಿಳಾಸಕ್ಕೆ ಬರೆದು ತರಿಸಿಕೊಳ್ಳಬಹುದು.

# ಸುಂದರಿ

## ಮೊದಲನೆಯ ಅಂಕ

### ದೃಶ್ಯ ೧

[ಶಾಮಣ್ಣನವರ ಮನೆಯ ಹಜಾರ. ಗೋಡೆಗಳಿಗೆ ಬಗೆಬಗೆಯ ಬಣ್ಣದ ಪಟಗಳನ್ನು ತಗುಲಿಹಾಕಿರುವರು. ನೆಲಕ್ಕೆ ಕೆಲವು ಜಮಖಾನಗಳನ್ನೂ ಮಂದಲಿಗೆಗಳನ್ನೂ ಹಾಸಿರುವರು. ಮೇಲ್ಚಾವಣಿಯಿಂದ ದೊಡ್ಡ "ಹ್ಯಾಂಗಿಂಗ್ ಲ್ಯಾಂಪು" ತೂಗಾಡುತ್ತ ಉರಿಯುತ್ತಿರುವುದು. ಹಸೆಯ ಮಣೆ ಹಾಕಿ ಅದರ ಮೇಲೆ ಜರತಾರಿಯ ಮಗುಟವನ್ನು ಹಾಸಿ, ಹಸೆಯ ಮುಂದೆ ಆರತಿಯ ಪರಿಕರಗಳು ಸಿದ್ಧವಾಗಿರುವುವು. ಒಂದು ಹಾರ್ಮೋನಿಯಂ ಇರುವುದು. ಸಮೀಪದಲ್ಲಿಯೇ ಒಂದು ಜಾಯಿಕಾಯಿ ಪೆಟ್ಟಿಗೆಯನ್ನಿಟ್ಟು ಅದರ ಮೇಲೆ ಬೆಳ್ಳಗಿರುವ "ಕ್ರೋಷಾ" ಚೌಕವನ್ನು ಹಾಸಿರುವರು. ಅದರ ಮೇಲೆ ಬೆಳ್ಳಿಯ ಲೋಟದಲ್ಲಿ ಅಕ್ಕಿ; ಅದಕ್ಕೆ ಚುಚ್ಚಿರುವ ಊದಕಡ್ಡಿಗಳು ಹೊಗೆಯಾಡುತ್ತಿರುವುವು. ಹಸೆಯ ಎರಡು ಕಡೆಗಳಲ್ಲಿಯೂ ಪಿತ್ತಾಳೆಯ ಕಂಬಗಳಲ್ಲಿ ಐದೈದು ಕುಡಿ ದೀವಿಗೆಗಳು ಉರಿಯುತ್ತಿರುವುವು. ಕರಿಯ ಮೊಕಮಲ್ಲಿನ ಅಂಗಿ ಷರಾಯಿಗಳನ್ನೂ ಕೆಂಪು ಮೊಕಮಲ್ಲಿನ ಜರತಾರಿ ಟೋಪಿಯನ್ನೂ ಧರಿಸಿರುವ ಏಳು ವರುಷ ವಯಸ್ಸಿನ ಹುಡುಗನು ಪ್ರವೇಶಿಸಿ, ನಾನಾ ವಸ್ತುಗಳನ್ನೂ ನೋಡುತ್ತ ಸುತ್ತಾಡಿ ಕೊನೆಗೆ ಊದಕಡ್ಡಿಯ ಪಾತ್ರೆಯ ಬಳಿಯಲ್ಲಿ ಕುಳಿತುಕೊಂಡು ಅದನ್ನೇ ದೃಷ್ಟಿಸಿ ನೋಡುತ್ತ ಸಂತೋಷಕ್ಕೆ ಚಪ್ಪಾಳೆ ಹೊಡೆಯುವನು.]

**ಕಾವೇರಮ್ಮ.**—(ಪ್ರವೇಶಿಸಿ) ಊದಕಡ್ಡಿ ಪಾತ್ರೆ ಉರುಳಿಸಿಬಿಟ್ಟೆಯಪ್ಪ. ಏನು ಚೇಷ್ಟೆಯೋ ಈ ಹುಡುಗ ಮಾಡೋದು! ರಂಗೂ! ಬಾರೊ! ಈ ಕಡೆಗೆ ಎದ್ದುಬಾರೊ. ಈ ವಿಶಾಲಿ ಎಲ್ಲಿ ಹೋದಳೋ ಕಾಣೆ! ರಂಗೂನ ಸ್ವಲ್ಪ ನೋಡಿಕೋಬಾರದೆ! ಲೇ, ವಿಶಾಲಿ, ಲೇ, ಲೇ.

**ವಿಶಾಲಾಕ್ಷಿ.**—(ಪ್ರವೇಶಿಸಿ) ಯಾಕಮ್ಮ, "ಎಲ್ಲಿ ಹೋದಳೋ ಈ ವಿಶಾಲಿ" ಅನ್ನೋದು? ನಿನಗೆ ಹೇಳದೆ ನಾನು ಎಂದಮ್ಮ ಮನೆಬಿಟ್ಟು ಹೋದದ್ದು? ಇಲ್ಲೇ ಇದ್ದೆ. ಪುಸ್ತಕಕ್ಕೆ ರಟ್ಟು ಹಾಕ್ತಿದ್ದೆ.

**ಕಾವೇರಮ್ಮ.**—ಒಳ್ಳೇ ಕೆಲಸವೇ ಮಾಡಿದೆ. ಅದಕ್ಕೆ ಇದೇ ಸಮಯವೇ? ರಟ್ಟು ಹಾಕಬೇಕಾದರೆ ಇವತ್ತೇ ಲಗ್ನವೇನೋ ಅದಕ್ಕೆ! ಚೇಷ್ಟೆಮಾಡದ ಹಾಗೆ ರಂಗೂನ ನೋಡಿಕೊಂಡಿರೇ ಅಂತ ನಾನು ಹೇಳಿದರೆ, ಅವನ್ನ ಇಲ್ಲಿಗೆ ಚೇಷ್ಟೆಗೆ ಬಿಟ್ಟು ಮಂಚದ ಕೋಣೇಲಿ ರಟ್ಟು ಹಾಕುತ್ತಾ ಕೂತಿದ್ದಾಳೆ. ರಂಗೂ ಇಲ್ಲಿ ಬಾಪ್ಪ.

**ರಂಗು.**—(ನಗುತ್ತ ತಿರುಗಿ ನೋಡಿ) ಬಂದೆ, ಬಂದೆ. (ಊದಕಡ್ಡಿಗಳ ಹೊಗೆಯನ್ನು ನೋಡುತ್ತ ಕುಳಿತೇ ಇರುವನು.)

**ವಿಶಾಲಾಕ್ಷಿ.**—ಅಮ್ಮ, ನನಗೆ ಅಳು ಬಂದಿತ್ತಮ್ಮ. ರಂಗೂನ ನೋಡಿಕೋ ಅಂತ ನೀನು ಹೇಳಿದ್ದು ಮರೆತೇಹೋಯಿತು.

**ಕಾವೇರಮ್ಮ.**—ವರ್ಷಾವದಿ ಹಬ್ಬ. ಅಳುವುದೂ ಅಂದರೇನೆ! (ಆದರದಿಂದ ಗಲ್ಲವನ್ನು ಅಂಗೈಯಲ್ಲಿ ಹಿಡಿದು ಮುದ್ದಿಸಿ) ಅತ್ತದ್ದು ಏಕೆ ಚಿನ್ನ? (ಮಗಳನ್ನು ತಬ್ಬಿಕೊಂಡು) ಅದೇಕೆ, ನನ್ನ ಬಂಗಾರ, ಅತ್ತದ್ದು? ನಾನೂ ಏನೂ ಅಂದಿಲ್ಲ. ಅವರೂ ನಿನ್ನ ಬಯ್ಯಲಿಲ್ಲ.

**ವಿಶಾಲಾಕ್ಷಿ.**—(ತಲೆಯ ಹೂವನ್ನು ತಾಯಿಗೆ ತೋರಿಸಿ) ಈ ನಿತ್ಯಮಲ್ಲಿಗೆ ದಂಡೆ ನನ್ನ ತಲೆಗೆ, ಸುಂದರಿ . . . . ಅಲ್ಲ ಅಲ್ಲ . . . . ಸುಂದರತ್ತಿಗೆ . . . ಈ ಮಲ್ಲಿಗೆ ದಂಡೆ ಮುಡಿಸಿ ಮುತ್ತಿಟ್ಟು ಮನೆಗೆ ಹೊರಟಳು. ಕಣ್ಣಿನಲ್ಲಿ ನೀರು ಹರೀತಾ ಇತ್ತು. ಯಾಕೆ, ಯಾಕೆ, ಅಂದೆ. ಮಾತನಾಡಲಿಲ್ಲ. ಅವಳು ಹೋದಮೇಲೆ ಹಜಾರದ ಬಾಗಿಲು ಚಿಲಕ ಹಾಕಿ, ಹಾಗೇ ನಿಂತು ಕೊಂಡೆ. ಬೀದಿ ನಡುವೇಲಿ ಅವಳು ಬಿಕ್ಕಿ ಬಿಕ್ಕಿ ಅಳ್ತಾ ಇದ್ದಳು. ನಾನು ಬಾಗಿಲು ಚಿಲಕ ತೆಗೆದು, ಅಳ್ತಾ ಅಳ್ತಾ "ಯಾಕೆ ಅತ್ತಿಗೆ" ಅಂದೆ. ಅವಳು ಬೇಗ ಸಮಾಧಾನಮಾಡಿಕೊಂಡು, ನನ್ನ ಕೆನ್ನೆ ಸವರಿ "ಎಂಥ ಮನಸ್ಸಮ್ಮ ನಿಂದು. ಅಳಬೇಡ. ನೂರಾರು ಕಾಲ ಅರಿಸಿನ ಕುಂಕುಮ ಇಟ್ಟುಕೊಂಡು ಹೂ ಮುಡಿದುಕೊಂಡು, ಮಂಗಳಗೌರಿ ಹಾಗೆ ಸುಖವಾಗಿರಮ್ಮ" ಎಂದು ಹರಸಿ ಹೊರಟುಹೋದಳು. ಅವಳೇಕಮ್ಮ ಅತ್ತದ್ದು?

**ಕಾವೇರಮ್ಮ.**—(ನಿಟ್ಟುಸಿರು ಬಿಟ್ಟು) ಅಯ್ಯೋ ಪಾಪ!...... ಇನ್ನೇನೆಂದಳು ?

**ವಿಶಾಲಾಕ್ಷಿ.**—ಅವಳು ಅತ್ತದ್ದು ಯಾಕೆ ಅಂತ ಕೇಳಿದೆ. ಅವಳು ಉತ್ತರ ಹೇಳಲಿಲ್ಲ. ಕಣ್ಣಲ್ಲಿ ನೀರು ಹರೀತಿತ್ತು. ನನ್ನ ಕೆನ್ನೆಗೆ ಮುತ್ತಿಟ್ಟು ಓಡಿಹೋದಳು. ನಾನೂ ಹೋಗೋಣ ಅಂತ ನೋಡಿದೆ. ಅವರ ಮನೇಲಿರೋ ಅಜ್ಜಿಗೆ ನಾನು ಹೋದರೆ ಸರಿಬೀಳೋದಿಲ್ಲ. ರಣಹದ್ದು ನೋಡಿದ ಹಾಗೆ ನೋಡ್ತಾರೆ. ಅವತ್ತು ಭಾವಿ ಕಟ್ಟೆಮೇಲೆ ಕೂತಿತ್ತು ನೋಡು, ಆ ರಣಹದ್ದು. ಅದರ ಕಣ್ಣಿನ ಹಾಗೇ ಇದೆ, ಆ ಅಜ್ಜಿ ಕಣ್ಣು.

**ಕಾವೇರಮ್ಮ.**—ದೊಡ್ಡವರನ್ನು ಹಾಗೆಲ್ಲಾ ಅನ್ನಬಾರದಮ್ಮ, ವಿಶಾಲ. (ನಿಟ್ಟುಸಿರುಬಿಟ್ಟು ಸ್ವಲ್ಪಹೊತ್ತು ಸುಮ್ಮನೆ ನಿಂತಿದ್ದು, ಆ ಬಳಿಕ ಮಗಳನ್ನು ತಬ್ಬಿಕೊಂಡು) ಎಷ್ಟು ಹೆಂಗರುಳು ಪುಟ್ಟ, ನಿನಗೂ ಸುಂದರೀಗೂ .... ಪಾಪ .... ಪಾಪ .... ಅದಿರಲಿ. ಹಬ್ಬದ ದಿನ ಮಕ್ಕಳು ಸಂತೋಷವಾಗಿರಬೇಕು.

**ವಿಶಾಲಾಕ್ಷಿ.**—ಅಲ್ಲಮ್ಮ, ಅವಳೂ ಅಳ್ತಾ ಹೋದಳು. ನೀನೂ ಈಗತಾನೆ ಕೆಂಪಾಚಾರಿ ಕುಲಿಮೆ ಹಾಗೆ ಉಸಿರುಬಿಟ್ಟು ಅಳು ಬರೋ ಹಾಗೆ ನಿಂತಿದ್ದೆ. ನಾನು ಹೇಗಮ್ಮ ನಗೋದು ?

**ಕಾವೇರಮ್ಮ.**—(ಬಲವಂತವಾಗಿ ನಕ್ಕು) ಇಲ್ಲಮ್ಮ ನಾನೂ ನಗ್ತೀನಿ .... ಇನ್ನು ಮುತ್ತೈದೆಯರೆಲ್ಲಾ ಒಬ್ಬೊಬ್ಬರಾಗಿ ಬರ್ತಾರೆ. ನೀನು ಸ್ವಲ್ಪ ಹೊತ್ತು ರಂಗೂನ ನೋಡಿಕೊ. ಹಾಗೇ ಕಣ್ಣೂ ಮುಖ ಚೆನ್ನಾಗಿ ತೊಳೆದುಕೊಂಡು ಸಾದು ಇಟ್ಟುಕೊ. ಅವನ್ನ ಮಾತ್ರ ಬಟ್ಟೆಮೇಲೆಲ್ಲಾ ನೀರು ಸುರಿದುಕೊಳ್ಳೋದಕ್ಕೆ ಬಿಡಬೇಡ. ಹಸೆಯಮೇಲೆ ಕೂತುಕೊಳ್ಳಬೇಕು. ಅವರು ಇನ್ನೇನು ಹೂವು ತರ್ತಾರೆ. ನಾನು ಹೂವಿನ ಕುಚ್ಚುಗಳನ್ನ ಚಿಕ್ಕ ಚಿಕ್ಕ ತುಂಡುಗಳಾಗಿ ಮಾಡಿ ತಟ್ಟೆಗೆ ಅಣಿಮಾಡಿದ್ದೋ ಹೊತ್ತಿಗೆ ನೀನೂ ರಂಗೂ ಬರಬೇಕು. ಆಮೇಲೆ ಇಬ್ಬರೂ ಹಸೇಮೇಲೆ ಕೂತುಕೊಳ್ಳೋರಂತೆ. ರಂಗು ಹೂ ಕಂಡರೆ ಹಟ ಹಿಡೀತಾನೆ. ಕೊಟ್ಟರೆ

ಚೂರುಚೂರು ಮಾಡ್ತಾನೆ. ಕರೆದುಕೊಂಡು ಹೋಗು ಕಂದ. ರಂಗೂ, ಬಾಮ್ಮ, ಅಕ್ಕನ ಜೊತೇಲಿ ಹೋಗಪ್ಪ.

**ರಂಗು.**—(ಎದ್ದು ಚಪ್ಪಾಳೆ ಹೊಡೆಯುತ್ತ ಬಂದು) ಅಮ್ಮ, ಅಮ್ಮ, ಹೇಳಮ್ಮ, ಊದಕಡ್ಡಿ ಹೊಗೆಯೆಲ್ಲಾ ಮೇಲ್ಮೇಲಕ್ಕೆ ಹೋಗೋದೇಕಮ್ಮ? ಮೇಲಕ್ಕೇ ಮೇಲಕ್ಕೇ ಅದು ಯಾಕೆ ಹೋಗೋದು?

**ಕಾವೇರಮ್ಮ.**—ಅದು ಯಾಕಾದರೂ ಹೋಗಲಿ. ಅದೆಲ್ಲಾ ಕೇಳಬಾರದು. ಹಸೆಮೇಲೆ ಕೂತುಕೊಳ್ಳುವಿಯಂತೆ, ಸುಮ್ಮನಿರು. ಈ ಮಾತೆಲ್ಲಾ ಬೇಡ.

**ರಂಗು.**—ಹೋಗಮ್ಮ. ನೀನು ಒಂದೂ ಹೇಳೋಲ್ಲ. ಸೂರ್ಯ ಹುಟ್ಟೋದೇಕೆ ಅಂದೆ. ಅದೂ ಹೇಳಲಿಲ್ಲ. ಸೂರ್ಯ ಬೆಳಗ್ಗೇನೆ ಹುಟ್ಟಿ ರಾತ್ರಿ ಏಕೆ ಹುಟ್ಟೋದಿಲ್ಲ ಅಂದೆ. ಅದೂ ಹೇಳಲಿಲ್ಲ. ಹಂಡೇಲಿ ಉರಿ ಹಾಕಿದರೆ ನೀರು "ಜೊಯ್" ಅನ್ನೋದೇಕೆ ಅಂದೆ. ಅದೂ ಹೇಳಲಿಲ್ಲ. ಸುಂದರಿ ಸರಿ. ಎಲ್ಲಾ ಹೇಳಿ ಮುತ್ತು ಕೊಡ್ತಾಳೆ. ನಂಗೆ ಅವಳಂಥ ಅಮ್ಮ ಬೇಕು.

**ವಿಶಾಲಾಕ್ಷಿ.**—ಬುದ್ಧಿ ಬೆಳೆಯಬೇಕಾದರೆ, ಹುಡುಗರು ಕೇಳಿದ್ದಕ್ಕೆಲ್ಲಾ ಉತ್ತರ ಹೇಳಬೇಕಂತಮ್ಮ. ನಮ್ಮ ಮೇಡಂ ಹೇಳಿದ್ದಾರೆ.

**ಕಾವೇರಮ್ಮ.**—(ರಂಗುವನ್ನು ಎತ್ತಿಕೊಂಡು ನಗುತ್ತ) ನಿಮ್ಮ ಮೇಡಂ ಹೇಳದೆ ಏನು! ಇವತ್ತೂ, ನಿನ್ನೆ, ನಾನು ಮಾಡಿರೋ ಹಾಗೆ ಸಂಕ್ರಾಂತಿ ಹಬ್ಬದ ಕೆಲಸಮಾಡಿ ಈ ಆರತಿಗೂ ಅಣಿಮಾಡಿಟ್ಟು ಸಾಕಾಗಿದ್ದರೆ, ಆಗ ನಿಮ್ಮ ಮೇಡಂ ಹುಡುಗರು ಕೇಳಿದ್ದಕ್ಕೆಲ್ಲಾ ಉತ್ತರ ಹೇಳೋರೋ ಬಿಡೋರೋ ತಿಳಿಯೋದು.

**ವಿಶಾಲಾಕ್ಷಿ.**—ಅಷ್ಟು ಸಾಕಾಗಿದ್ದರೆ ನಾಳೆ ಆರತಿ ಮಾಡಬಹುದಾಗಿತ್ತಲ್ಲ. ನಾನೂ ರಂಗೂ ಇವತ್ತೇ ಆಗಬೇಕೂ ಅಂದಿದ್ದೇವೇನಮ್ಮ?

**ಕಾವೇರಮ್ಮ.**—(ನಗುತ್ತ) ಸಾಕು, ಹೋಗೆ, ನಿನ್ನ ಉಪದೇಶ. (ಮಗುವನ್ನು ಕೆಳಕ್ಕಿಳಿಸಿ) ಅಕ್ಕನ ಜೊತೆಗೆ ಹೋಗು, ಚಿನ್ನ. (ಅಕ್ಕನೂ ತಮ್ಮನೂ ಹೋಗುವರು.)

**ಶಾಮಣ್ಣ.**—(ಹುಡುಗರು ಹೋದ ಕಡೆಯ ಎದುರು ಪಾರ್ಶ್ವದಿಂದ ಹೂವಿನ ಕುಚ್ಚುಗಳನ್ನು ಹಿಡಿದು ಪ್ರವೇಶಿಸಿ) ಹೂವು ತೆಗೆದುಕೋ.

**ಕಾವೇರಮ್ಮ.**—(ಹೂವನ್ನು ತೆಗೆದುಕೊಂಡು ಒಂದು ತಟ್ಟೆಯನ್ನು ತಂದು ಹೂವನ್ನು ತುಂಡುಗಳಾಗಿ ಚಿವುಟಿ ಹಾಕುತ್ತ) ಇನ್ನು ನೀವು ಇಲ್ಲಿರುವ ಹಾಗಿಲ್ಲ. (ನಗುತ್ತ) ಅದು ನಿಮಗೂ ಗೊತ್ತೇ ಇದೆ.

**ಶಾಮಣ್ಣ.**—(ನಗುತ್ತ) ಇದೂ ಸರಿ. ಇನ್ನೂ ನಾನು ಮನೆಗೆ ಬಂದು ನಿಲ್ಲೋಕೇ ಇಲ್ಲ, ಆಗಲೇ ಹೊರಡಬೇಕೆಂತ ಹುಕುಂ.

**ಕಾವೇರಮ್ಮ.**—(ಮುಗುಳು ನಗೆಯಿಂದ) ಅಷ್ಟಲ್ಲದೆ ಏನಂತೆ?.... ನೀವೇ ಹೇಳಿದ್ದಿರಿ, ಹೆಂಗಸಿಗೆ "ಹತ್ತು ಮಕ್ಕಳನ್ನ ಪಡೆದು ಗಂಡನ್ನ ಹನ್ನೊಂದನೇ ಮಗುವಿನ ಹಾಗೆ ಕಾಣು*" ಅಂತ ವೇದದಲ್ಲಿಯೇ ಹೇಳಿದೆ ಯಂತೆ ಅಂತ. ಹೇಳಿದ ಹಾಗೆ ಕೇಳೋದೆ ತಾನೆ ಮಕ್ಕಳ ಕೆಲಸ?

**ಶಾಮಣ್ಣ.**—(ನಕ್ಕು) ಗಂಡನಿಗೆ ಡ್ರಿಲ್ ಮಾಡಿಸು ಅಂತಲ್ಲ, ವೇದ ದಲ್ಲಿ ಹೇಳಿದ್ದು. ಅಷ್ಟು ವಿಶ್ವಾಸವಾಗಿ ಮಗುವಿನಂತೆ ಕಂಡು ಗಂಡನನ್ನು ಆದರದಿಂದ ನೋಡಿಕೋ ಅಂತ. ಅದಿರಲಿ, ಇವತ್ತು ನನ್ನ ಮನಸ್ಸು ಕಲಕಿಹೋಗಿದೆ, ಕಲಕಿಹೋಗಿದೆ ನೋಡು. ಎಷ್ಟು ಗೋಳಾಡಿಸೋದು. ಪಾಪ, ಸುಂದರೀನ!

**ಕಾವೇರಮ್ಮ.**—ಪಾಪ, ಹೌದಂತೆ ನೋಡಿ. ನೀವು ಏನೇ ಹೇಳಿ. ಮನೆತಪ್ಪಿದ ಹುಡುಗಿಯರಿಗೆ ನಮ್ಮ ಬ್ರಾಹ್ಮಣ ಜಾತೀಲಿ ಸುಖವಿಲ್ಲ. ಹೀಗೆ ಕಿರುಗುಟ್ಟಿಸೋದೆ!

**ಶಾಮಣ್ಣ.**—ಇಷ್ಟು ದೊಡ್ಡ ಮಗಳು, ಅಷ್ಟು ದೊಡ್ಡ ಮಗ, ಇಬ್ಬರಿದ್ದೂ ಭಾವ ಎರಡನೇ ಮದುವೆಮಾಡಿಕೊಂಡದ್ದು ಶುದ್ಧ ತಪ್ಪು, ಶುದ್ಧ ತಪ್ಪು. ತುಂಬ ವಯಸ್ಸಾಗಿಲ್ಲದೆ ದೊಡ್ಡಮಕ್ಕಳೂ ಇಲ್ಲದೆ ಇದ್ದರೆ ಎರಡನೇ ಮದುವೆಮಾಡಿಕೊಂಡರೂ ಅದೊಂದು ರೀತಿ. ಮದುವೆ ಮಾಡಿಕೊಂಡರೂ ಮಕ್ಕಳ ಪ್ರೇಮ ಬಿಡಬೇಕೆ?

---

* "ದಶಾಸ್ಯಾಂ ಪುತ್ರಾನಾಧೇಹಿ ಪತಿಮೇಕಾದಶಂ ಕೃಧಿ."

**ಕಾವೇರಮ್ಮ.**—ಅದು ಸಾವಿರ ಸಲ ಹೇಳಿ . . . . ಸುಂದರಿ ಗಂಡ ಹೋದದ್ದು ಸಂಕ್ರಾಂತಿ ಹಬ್ಬದ ದಿನ. ಅಟ್ಟಹಾಸದಲ್ಲಿ ಆ ಹಬ್ಬ ಅವಳೆದುರಿಗೆ ಮಾಡ್ತಿದ್ದಾರೆ. ನಿಮ್ಮ ಭಾವನೂ ಸರಿಯೆ. ಹೆಂಡತಿ ಮಾತೂ, ಅತ್ತೆ ಮಾತೂ ಕೇಳಿ ಗೆಜ್ಜೆ ಕಟ್ಟಿದ ಬೆಕ್ಕಿನಹಾಗೆ ಕುಣೀತಾರೆ. ಬೆಂಗಳೂರಿನಿಂದ ಅಡಿಗೆಯವನನ್ನು ಕರೆಸಿ ಚಿರೋಟಿ ಮಾಡಿಸದೆ ಹೋಗಿದ್ದರೆ, ಯಾವ ದೇವರು ಅಳ್ತಾ ಇತ್ತೋ ಕಾಣೆ.

**ಶಾಮಣ್ಣ.**—ಪಾಪ! ಸುಂದರೀಗೆ ಎಷ್ಟು ಸಂಕಟವಾಗಿರಬೇಕು! ತಾಯಿ ಕಳೆಕೊಂಡ ತಬ್ಬಲಿ ಮಗು . . . . ಗಂಡನಿಲ್ಲ . . . . ಕೇಳುವವರು ಯಾರು?

**ಕಾವೇರಮ್ಮ.**—ಸಂಕಟ ಅಂತ ಹೇಳ್ತೀರಾ! ಪಾಪ, ಇಲ್ಲಿಗೆ ಬಂದು ಅತ್ತು ಅತ್ತು ಸಾಕಾದಳು. "ಅತ್ತೆ, ಅತ್ತೆ, ಈ ಹಬ್ಬ ಬಿಟ್ಟು ಇನ್ನ್ಯಾವ ಹಬ್ಬವನ್ನಾದ್ರೂ ಮಾಡಬಾರದಾಗಿತ್ತೆ. ಚಿರೋಟಿ ಜೊತೆಗೆ ಫೇಣೀ ಬೇಕಾದ್ರೂ ಮಾಡಿಸಬಾರದಾಗಿತ್ತೆ" ಅಂತ ಗೋಳಾಡಿದಳು. ನನಗೆ ಕೂಡ ಕರುಳೇ ಕಿತ್ತುಬರೋ ಹಾಗಾಯಿತು.

**ಶಾಮಣ್ಣ.**—(ನಿಟ್ಟುಸಿರುಬಿಟ್ಟು ಒಂದೆರಡುಕ್ಷಣ ನಿಂತಿದ್ದು) ಹೋಗಲಿ. ನಾವಾದರೂ ಇನ್ನುಮೇಲೆ ಸಂಕ್ರಾಂತಿ ಹಬ್ಬ ನಿಲ್ಲಿಸಿಬಿಡೋಣ.

**ಕಾವೇರಮ್ಮ.**—ನಾನೂ ಹಾಗೇ ನಿರ್ಧರಮಾಡಿದ್ದೀನಿ. ಏನೋ ಶಾಸ್ತ್ರಕ್ಕೆ ಸ್ವಲ್ಪ ಪಾಯಸ ಮಾಡಿದರಾಯಿತು. ಸುಂದರಿ ಗುಣವೋ, ರೂಪವೋ, ನಡತೆಯೋ, ಅವಳ ಪ್ರೀತಿ ವಿಶ್ವಾಸಗಳೋ, ಒಂದಕ್ಕಿಂತ ಒಂದು ಹೆಚ್ಚು. ಚಿನ್ನದ ತಂತಿ ಎಳೆದ ಹಾಗೆ ಅವಳ ಧ್ವನಿಯೋ, ಅವಳ ಸಂಗೀತವೋ! ದೇವಕನ್ನಿಕೆಯಂಥ ಹುಡುಗಿ. ಅತ್ತಿಗೆಮ್ಮ ಅವರಿಗೆ ಬರ್ತಿದ್ದ ಸಂಗೀತವಷ್ಟನ್ನೂ ಅವಳಿಗೆ ಅರೆದು ಹುಯ್ದಿದ್ದಾರೆ. ಕಣ್ಣು ಕಾಣದ ದೇವರು, ಅವಳ ಅರಿಸಿನ ಕುಂಕುಮ ಕಿತ್ತುಕೊಂಡ. (**ನೇಪಥ್ಯದಲ್ಲಿ ಕೆಮ್ಮಿದ ಧ್ವನಿಯಾಗುವುದು. ಮುತ್ತೈದೆಯರು ಮಾತನಾಡಿಕೊಂಡು ಬರುತ್ತಿರುವ ಸದ್ದು ಕೇಳಿಸುವುದು.**) ಮುತ್ತೈದೆಯರು ಬಂದಹಾಗಿದೆ, ಅಂದರೆ. (**ನೇಪಥ್ಯದ ಕಡೆಗೆ ನೋಡಿ ಅವಸರದಿಂದ**) ಬಂದೇ ಬಿಟ್ಟರು, ಹತ್ತಿರಕ್ಕೇ ಬಂದರು.

(ವಿಶಾಲಾಕ್ಷಿ ಹೋಗಿದ್ದ ಮಾರ್ಗವನ್ನು ತೋರಿಸಿ ಗಟ್ಟಿಯಾದ ಪಿಸುಮಾತಿನಲ್ಲಿ) ಹೀಗೆ ಹಿತ್ತಿಲು ಬಾಗಿಲಿನಿಂದ ನೀವು ಹೋದರೆ ವಾಸಿ.

**ಶಾಮಣ್ಣ.**—(ನಗುತ್ತ) ಆರತಿ ಅಕ್ಷತೆ ದಿನ ಹೆಂಗಸರಿಗೆ ಮ್ಯಾಜಿಸ್ಟ್ರೇಟ್ ಅಧಿಕಾರ. (ಹೋಗುವನು)

**ಕಾವೇರಮ್ಮ.**—(ನೇಪಥ್ಯದ ಕಡೆಗೆ ಹೋಗಿ, ಬಂದ ಮುತ್ತೈದೆಯರನ್ನೆಲ್ಲಾ ಎದುರುಗೊಂಡು ಕುಳ್ಳಿರಿಸಿ) ಆರತಿ ಬೇಗ ಪೂರೈಸಿಬಿಡೋಣ. (ನೇಪಥ್ಯದ ಕಡೆಗೆ ನೋಡಿ ಲಕ್ಷಮ್ಮನೂ, ಅವಳ ಮಗಳು ಸೀತಮ್ಮನೂ, ಸುಂದರಿಯೂ ಪ್ರವೇಶಿಸಿದುದನ್ನು ಕಂಡು) ಬನ್ನಿ, ಬನ್ನಿ ಲಕ್ಷ್ಮಮ್ಮನೋರೆ, ಬಾರಮ್ಮ ಸೀತಮ್ಮ; ಬಾ ತಾಯಿ, ಸುಂದರಿ. (ಎದುರು ಪಾರ್ಶ್ವಕ್ಕೆ ನೋಡಿ) ಲೇ ವಿಶಾಲಿ, ಆ ಕುರ್ಚಿ ತಾರೆ. (ವಿಶಾಲಾಕ್ಷಿಯು ತಂದು ಹಾಕಿದ ಕುರ್ಚಿಯನ್ನು ತೋರಿಸಿ) ಲಕ್ಷ್ಮಮ್ಮನೋರೆ, ನೀವು ಮಡಿ. ಇದರಮೇಲೆ ಕೂತುಕೊಳ್ಳಿ. ವಿಶಾಲಿ, ಜಮುಖಾನಕ್ಕೆ ಸೋಕೊ ಹಾಗೆ ಕುರ್ಚಿ ಇಟ್ಟಿದ್ದೀಯೆ. (ದೂರವಾಗಿಟ್ಟು) ಕೂತುಕೊಳ್ಳಿ ಲಕ್ಷ್ಮಮ್ಮನೋರೆ. ಸೀತಮ್ಮ, ಆ ಕಡೆ ಮುತ್ತೈದೆಯರ ಜೊತೆಗೆ ನೀನೂ ಸುಂದರಿಯೂ ಕೂತುಕೊಳ್ಳಿ. (ಸೀತಮ್ಮನು ಆರೀತಿ ಮಾಡುವಳು. ಸುಂದರಿಯು ಸುಮ್ಮನೆ ನಿಂತಿರುವಳು.) ಇದೇಕೆ ಲಕ್ಷ್ಮಮ್ಮನೋರೆ, ನಿಂತೇ ಇದ್ದೀರಿ? ಇದು ಕಬ್ಬಿಣದ ತಗಡಿನ ಕುರ್ಚಿ. ಮೈಲಿಗೆಯಾಗುವುದಿಲ್ಲ. ಕೂತುಕೊಳ್ಳಿ.

**ಲಕ್ಷಮ್ಮ.**—ನಾನು ನಡುಮನೆ ಒಳಬಾಗಿಲಿನ ಹತ್ತಿರ ಕೂತುಕೊಂಡು ನೋಡ್ತೀನಿ. ಇಂಥ ಸಮಯಗಳಲ್ಲಿ ಬರೋಕೇ ಸಂಕೋಚ. ಏನೋ ದೊಡ್ಡ ಪದಾರ್ಥ ಅಂತ ನೀವು ಗೌರವಕೊಟ್ಟರೆ, ಬರದೇ ಹೋದರೆ ಚೆನ್ನವೇ ಅಂತ ಯೋಚನೆಮಾಡಿ ಬಂದೆ. ಹೊಸಿಲಿನ ಹತ್ತಿರ ಒಳಬಾಗಿಲಲ್ಲಿ ಕೂತು ನೋಡಿದರಾಯಿತು.

**ಕಾವೇರಮ್ಮ.**—(ಉಪಚಾರ ಹೇಳುವ ನೈಚ್ಯಾನುಸಂಧಾನದ ಧ್ವನಿಯಲ್ಲಿ) ಚೆನ್ನಾಯಿತು, ಚೆನ್ನಾಯಿತು. ಅದಕ್ಕೆಲ್ಲಾ ಏನು ಹೇಳಿ. ಇಲ್ಲೇ ಕೂತುಕೊಳ್ಳಿ.

**ಲಕ್ಷಮ್ಮ.**—ನಿಮ್ಮ ವಿಶ್ವಾಸ, ಆಗಲಮ್ಮ. (ಕುಳಿತುಕೊಳ್ಳುವಳು)

**ಕಾವೇರಮ್ಮ.**—(ಸಮಾಧಾನದ ಧ್ವನಿಯಿಂದ) ಅದೀಗ ಸರಿ. ಸುಂದರಿ, ಅವರಂತು ದೊಡ್ಡೋರು. ಉಪಚಾರ ಹೇಳಬೇಕು. ನೀನು ಹೇಳಿಸಿಕೋ ಬೇಡ; ನಡಿ, ತಾಯಿ. ಸೀತಮ್ಮನ ಹತ್ತಿರ ಕೂತುಕೊ. (ಲಕ್ಷಮ್ಮನು ಆಕಸ್ಮಿಕವಾಗಿ ಆಕಾಶವೇ ತನ್ನಮೇಲೆ ಕಳಚಿ ಬಿದ್ದಂತೆ ನೋಡುವಳು. ಸುಂದರಿಯು ಸೀತಮ್ಮನ ಹತ್ತಿರ ಕುಳಿತುಕೊಂಡಮೇಲಂತು ಮಾತನಾಡುವುದಕ್ಕಿಲ್ಲದ ವಿಷಮ ಸಂಕಟ ದಿಂದ ಕೂಡಿ ಲಕ್ಷಮ್ಮನು ಒಂದೆರಡುಸಲ ಉಗುಳು ನುಂಗುವಳು. ಆ ಅವಸ್ಥೆಯನ್ನು ನೋಡಲಾರದೆ ಕಾವೇರಮ್ಮನು "ವಿಶಾಲಿ, ಕಾಸಿನಸರ ಸೊಟ್ಟವಾಗಿ ಹಾಕಿಕೊಂಡಿದ್ದೀ ಯಲ್ಲೇ" ಎಂದು ಹೇಳಿ ಅದನ್ನು ಸರಿಮಾಡುವ ನೆವದಲ್ಲಿ ನಗುತ್ತ ಮುತ್ತೈದೆಯರ ಕಡೆಗೆ ಹೋಗುವಳು.)

**ಲಕ್ಷಮ್ಮ.**—ಸುಂದರಿ, ನಿಮ್ಮತ್ತೆ ಉಪಚಾರ ಹೇಳಿದ್ದೇ ಸಾಕು ಅಂತ ನೀನು ಹೀಗೆ ಮಾಡಬಾರದು. ನಿಂಗೇನು ವಯಸ್ಸು ಸಾಲದೆ, ಹೇಳು. ಅರಿಸಿನ ಕುಂಕುಮವಿಲ್ಲದ ಸಕೇಶಿ, ಮುತ್ತೈದೆಯರ ಜೊತೇಲಿ ಕೂತುಕೊಳ್ಳೋದಕ್ಕೆ ಯೋಗ್ಯತೆ ಬಂದೀತೆ! ಈ ಕಡೆ ಎದ್ದು ಬಾ ಮತ್ತೆ.

**ಸುಂದರಿ.**—(ವ್ಯಥೆಯಿಂದ ಮುಖ ಚಿಕ್ಕದು ಮಾಡಿಕೊಂಡು ಎದ್ದು ಬಂದು) ತಿಳಿಯಲಿಲ್ಲ, ಅಜ್ಜಿ. ಅತ್ತೆ ಹೇಳಿದ್ದಕ್ಕೆ ಕೂತುಕೊಂಡೆ. ನನಗೂ ಅರಿಸಿನ ಕುಂಕುಮವಿತ್ತು, ಅಜ್ಜಿ. (ಮುಂದೆ ಮಾತು ಹೊರಡದೆ ಸುಮ್ಮನಾಗುವಳು.)

**ಲಕ್ಷಮ್ಮ.**—ಹೊರಗಿನೋರು—ನಿಮ್ಮತ್ತೆ ಕಾವೇರಮ್ಮನೋರು ಕೂಡ ನನಗೆ ಗೌರವಕೊಡುತ್ತಾರೆ. ನೀನು ಅಗೌರವ ತೋರಿಸಿ ಎದುರು ಮಾತು ಹೇಳ್ತೀಯಲ್ಲ. ಇವಳಿಗೂ ಅರಿಸಿನ ಕುಂಕುಮವಿತ್ತಂತೆ. ನನಗೂ ಅರಿಸಿನ ಕುಂಕುಮವಿತ್ತು. ನನಗೂ ಜಡೆಯಿತ್ತು. ಆದರೆ, ಆದರೆ, ಈಗ ಅದೆಲ್ಲಾ ಕಟ್ಟಿಕೊಂಡು ಮಾಡೋದೇನು?

**ಸುಂದರಿ.**—ನನಗೆ ಇನ್ನೂ ಜಡೆಯುದೆಯಲ್ಲ. ಹಾಳು ಜಡೆ. ಅದಕ್ಕೇನೊ ಈ ಮಾತು....ನಿಮ್ಮ ದಮ್ಮಯ್ಯ ಅಜ್ಜಿ, ಈಗ ಆ ಮಾತೆಲ್ಲಾ ಬೇಡ.

**ಕಾವೇರಮ್ಮ.**—ಲಕ್ಷಮ್ಮನೋರೆ! ಪಾಪ, ಸುಂದರಿ ಇನ್ನೂ ಹುಡುಗಿ. ಏನೂ ಅರಿತಿಲ್ಲ, ಎಲ್ಲರ ಜೊತೇಲೇ ಅಲ್ಲೇ ಕೂತುಕೊಳ್ಳಲೇಳಿ.

**ಲಕ್ಷ್ಮಮ್ಮ.**—ಅದೃಷ್ಟವಿದ್ದು ಅರಿಸಿನ ಕುಂಕುಮವಿದ್ದಿದ್ದರೆ, ಎರಡು ಮೂರು ಮಕ್ಕಳ ತಾಯಿಯಾಗಬೇಕಾಗಿತ್ತು. ಇನ್ನೂ ಹುಡುಗಿಯೆಂದ ರೇನು ಹೇಳಿ. ಅವಳು ಅಲ್ಲಿ ಕೂತುಕೊಂಡರೆ ನಾನು ಹೊರಟುಹೋಗ್ತೀನಿ. ಧರ್ಮ ಮುಳುಗಿ ಹೋಗೋದು ನಾನು ಸಹಿಸಲಾರೆ ನೋಡಿ.

(ರಂಗುವು ಕೆನ್ನೆಗೆಲ್ಲಾ ಮಸಿ ಬೊಳಿದುಕೊಂಡು ಕೈಗಳಿಗೆಲ್ಲಾ ಮಸಿ ಮಾಡಿಕೊಂಡು ಪ್ರವೇಶಿಸುವನು. ಸುಂದರಿ, ಕಾವೇರಮ್ಮ ಇವರಿಬ್ಬರ ಹೊರತು ಎಲ್ಲರೂ ನಗುವರು.)

**ವಿಶಾಲಾಕ್ಷಿ.**—(ನಗುತ್ತ) ನೋಡಮ್ಮ, ಒಂದು ನಿಮಿಷ ಕುರ್ಚಿ ತರೋಕೆ ಹೀಗೆ ಬಂದೆ, ರಂಗು ಈ ಹಗರಣ ಮಾಡಿದ್ದಾನೆ.

**ಕಾವೇರಮ್ಮ.**—ರಂಗೂ, ರಂಗೂ, ಏನು ಹೇಳಲೋ ನನ್ನ ಅದೃಷ್ಟಕ್ಕೆ.

**ರಂಗು.**—ಏನೂ ಹೇಳಬೇಡಮ್ಮ....ಅಮ್ಮ, ಅಮ್ಮ ಬಿಸ್ಕತ್ತು ಪೊಟ್ಣಕೊಟ್ಟರೇ ನಾನು ಹಸೇಮೇಲೆ ಕೂತ್ಕೊಳ್ಳೋದು; ಇಲ್ಲದೇ ಹೋದರೆ ನಿನ್ನ ಜೊತೆ ಠೂ, ಠೂ, ಠೂ. ಅಮ್ಮ, ಅಮ್ಮ, ಮಸಿ ಕಪ್ಪ ಗಿರೋದೇಕಮ್ಮ ?

**ಕಾವೇರಮ್ಮ.**—ನೀನು ಕೇಳಲಿ ಅಂತ. ಹೋಗೊ, ಚೇಷ್ಟೆ ಹುಡುಗ; ನನ್ನ ಮಾತನಾಡಿಸಬೇಡ. ಹಸೆಮೇಲೆ ಹೇಗೆ ಕೂರಿಸಬೇಕೋ ಕಾಣೆ.

**ರಂಗು.**—ನಾನು ಕೇಳಿದ್ದು ಹೇಳಮ್ಮ. ಬಿಸ್ಕತ್ತು ಪೊಟ್ಣ ಮುಚ್ಚಿಟ್ಟಿರೋದು ತೆಗೆದುಕೊಟ್ಟರೇ ನಾನು ಹಸೆಮೇಲೆ ಕೂತು ಕೊಳ್ಳೋದು. ಅಮ್ಮ ಮಸಿ ಕಪ್ಪಗಿರೋದೇಕಮ್ಮ ?

**ಸುಂದರಿ.**—ರಂಗೂ, ನಿನಗೆ ಕೈ ಮುಖ ತೊಳೆದು, ನಾನು ಹೇಳ್ತೀನಿ ಬಾ. (ಅವಳು ಆದರದಿಂದ ಎತ್ತಿಕೊಳ್ಳುವಳು. ರಂಗು ಹಿಗ್ಗುವನು.)

**ರಂಗು.**—ಅಮ್ಮ, ನೀನು ಸುಂದರಿ ಅಂಥ ಅಮ್ಮನಾಗಮ್ಮ. ಸುಂದರಿ, ಹೇಳು, ಹೇಳು, ಮಸಿ ಕಪ್ಪಗಿರೋದೇಕೆ ?

(ಎಲ್ಲರೂ ನಗುವರು. ಸುಂದರಿಯು ಅವನನ್ನು ಎತ್ತಿಕೊಂಡು ಹೋಗುವಳು.)

**ಕಾವೇರಮ್ಮ.**—ಏನು ಚಪಲವೋ ಈ ಹುಡುಗರಿಗೆ! ಹೋಳಿಗೆ ಪಾಯಸದ ಊಟವಾಗಿದೆ. ಬಿಸ್ಕತ್ತು ಬೇಕಂತೆ.

**ಮುತ್ತೈದೆಯರಲ್ಲೊಬ್ಬಳು.**—ಈ ಸಂಕ್ರಾಂತಿ ಹಬ್ಬ ಏನು ಹಬ್ಬವೋ ನೋಡಿ. ಮಕ್ಕಳ ತಲೆಮೇಲೆ ಎಲಚಿಹಣ್ಣೂ ಕಾಸೂ ಎರೆಯೋ ಹಬ್ಬ. ಹಣ್ಣೂ ಹೊಸ್ನೂ ಕೊಟ್ಟು ಕಾಪಾಡುವ ಭೂಮಿದೇವಿಹಾಗೆ ಮಕ್ಕಳನ್ನ ಕಾಪಾಡಬೇಕೂ ಅಂತ ಇದರ ಅರ್ಥವೋ ಏನೋ.

**ಮುತ್ತೈದೆಯರಲ್ಲಿ ಮತ್ತೊಬ್ಬಳು.**—ಇರಬಹುದು, ಇರಬಹುದು. ಎಂಥ ಅರ್ಥ ಹೇಳಿದಿರೀ ಅಂದರೆ.

**ಕಾವೇರಮ್ಮ.**—ಸುಬ್ಬಮ್ಮನವರ ಬುದ್ಧಿ ಕೇಳಬೇಕೆ! ಅಂತು ಮಕ್ಕಳ ತಲೆಯಮೇಲೆ ಹಣ್ಣು ಹೊಸ್ನು ಎರೆದು ಆಶೀರ್ವಾದಮಾಡುವುದಕ್ಕಿಂತ ತಾಯಿಯರಿಗೆ ಮತ್ತ್ಯಾವುದೂ ಅಷ್ಟು ಸಂತೋಷಕರವಾಗಿಲ್ಲ, ನೋಡಿ.

**ಲಕ್ಷ್ಮಮ್ಮ.**—ನಿಮ್ಮ ಹುಡುಗ ಬಿಸ್ಕತ್ತು ಕೇಳಿದ. ಹಬ್ಬಕ್ಕೆ ನಮ್ಮ ಮನೆಯಲ್ಲಿ ಚಿರೋಟಿ ಮಾಡಿದ್ದೆವು, ನೋಡಿ. ನಿಮ್ಮ ಮನೆ ಹುಡುಗರಿಗೂ ಒಂದೆರಡು ಕಳುಹಿಸಬೇಕೂ ಅಂತ ಮಧ್ಯಾಹ್ನದಿಂದಲೂ ಅಂದುಕೊಂಡೆ. ಮರೆತೇ ಹೋಯಿತು.

**ಕಾವೇರಮ್ಮ.**—ಏನೋ ಅಮ್ಮ, ನಿಮ್ಮ ವಿಶ್ವಾಸ, ನಿಮ್ಮ ಸಂತೋಷ.

**ಸುಬ್ಬಮ್ಮ.**—ಅವರ ಧಾರಾಳ ಹೇಳ್ತೀರಾ ಮತ್ತೆ. ಅಬ್ಬ! ಎಂಥ ಕೈಯೋ ಅವರದು! ನಮ್ಮ ಮನೆಗೆ ನಿತ್ಯವೂ ಮಜ್ಜಿಗೆ ಕೊಡ್ತಾರೆ. ಪಾಪ, ಇಂದಿರಮ್ಮನವರು ಬದುಕಿದ್ದಾಗಲೂ ಅಷ್ಟೆ. ನಿತ್ಯವೂ ಮೊಸರು ಕೊಡೋರು. ಮುತ್ತಿನಂಥ ಸಂಸಾರ. ಹಡಗು ಮುಳುಗಿದಹಾಗೆ....

**ಲಕ್ಷ್ಮಮ್ಮ.**—(ಕೋಪದಿಂದ) ಸುಬ್ಬಮ್ಮನೋರೆ, ಸುಬ್ಬಮ್ಮನೋರೆ, ನಾಲಿಗೆ ಹರಿಬಿಡಬೇಡಿ. ಸಂಸಾರ ಏನಾಗಿದೆ, ಈಗ? ಹಲ್ಲು ಹಿಡಿದು ಮಾತನಾಡಿ.

**ಸುಬ್ಬಮ್ಮ.**—ಅಯ್ಯೋ ನಿಜವಮ್ಮ, ನಿಜ; ನಾನು ಇಂದಿರಮ್ಮನವರ ವಿಷಯವೇ ಯೋಚನೆಮಾಡ್ತಾ ಬುದ್ಧಿ ಓಡಿಸಿಬಿಟ್ಟೆ. ಏನೇನೋ ಅಂದುಬಿಟ್ಟೆ.

**ಲಕ್ಷಮ್ಮ.**—ಹಾಗೆ ಬನ್ನಿ. ಆಗ ಮುತ್ತಿನಂಥ ಸಂಸಾರವಾಗಿದ್ದರೆ ಈಗ ರತ್ನದಂಥ ಸಂಸಾರವಾಗಿದೆ. ಆಗ ಕೊಡ್ತಾ ಇದ್ದ ಮನೆಗಳಿಗೆಲ್ಲಾ ಈಗಲೂ ಮಜ್ಜಿಗೆ ಕೊಡ್ತಾ ಇದ್ದೀವಿ. ನನ್ನ ಮಗುವೂ ತನ್ನ ಸವತಿಹಾಗೆ ಹೊಗಳಿಸಿಕೊಳ್ಳಲೀ ಅಂತ ನನಗೂ ಆಶೆ. ಇಷ್ಟಕ್ಕೂ ರಾಮರಾಯರು ಅನ್ನೋ ಹೆಸರಿಗೆ ಸೀತಮ್ಮ ಅನ್ನೋ ಹೆಸರು ಹೊಂದಿದಹಾಗೆ ಇಂದಿರಮ್ಮ ಅನ್ನೋ ಹೆಸರು ಹೊಂದೋದೇ ಇಲ್ಲ. ಹಾಲಿನಂಥ ಸಂಸಾರ. ಅಳಿಯ ಮಗಳು ರಾಮಾಸೀತೆಯರ ಹಾಗೆಯೇ ಇದ್ದಾರೆ.

**ಸುಂದರಿ.**—(ರಂಗುವಿನೊಡನೆ ಪ್ರವೇಶಿಸಿ ಅವನನ್ನು ಹಸೆಯಮೇಲೆ ಕುಳ್ಳಿರಿಸಿ) ಅಜ್ಜಿ, ಅಜ್ಜಿ, ಸೀತೆ ರಾಮನಿಗೆ ಎರಡನೇ ಹೆಂಡತಿಯೇ ಹೇಳಿ. ಮೊದಲನೇ ಹೆಂಡತಿಯೆಂತಲೇ ಜ್ಞಾಪಕ.

**ಲಕ್ಷಮ್ಮ.**—(ಕೋಪದಿಂದ) ಮಾತೆತ್ತಿದರೆ ನನ್ನ ಸಟ್ಟುಗ ಎಲ್ಲಿರಿಸಲೀ ಅಂತೀಯೆ! ಇದನ್ನು ಕೇಳಿದರೆ ನನ್ನ ಮೈ ಉರಿದುಹೋಗುತ್ತೆ. ಕಲಿ ಹೆಚ್ಚಿ ಧರ್ಮ ಹಾಳಾಗಿ ಹೋಯಿತು.

**ಸುಂದರಿ.**—(ನಗುತ್ತ) ಸಮ್ಮಮ್ಮನ ಸುದ್ದಿ ಎತ್ತಿ, ಸಿಕ್ಕಿದಹಾಗೆ ನೀವೂ ಹೇಳಬೇಡಿ ಅಜ್ಜಿ. ನನ್ನ ಮೈಯೂ ಉರಿದುಹೋಗಿಬಿಟ್ಟೀತು. ವಿಶಾಲು, ಬಾರೆ ಮುತ್ತು. ನೀನೂ ಹಸೆಯಮೇಲೆ ಕೂತುಕೊ.

**ವಿಶಾಲಾಕ್ಷಿ.**—ಸುಂದರತ್ತಿಗೆ, ಮೊನ್ನೆ ದಿನ ನೀನು ನಿಮ್ಮ ಚಿಕ್ಕಮ್ಮನಿಗೆ ಹೇಳಿಕೊಡ್ತಾ ಇದ್ದೆಯಲ್ಲ, ಹಸೆಗೆ ಕರೆದ ಹಾಡು, ನೀನು ಅದನ್ನು ಹೇಳಿದರೇ ನಾನು ಹಸೆಯಮೇಲಕ್ಕೆ ಬರೋದು.

**ಸುಂದರಿ.**—ವಿಶಾಲು, ನನ್ನ ಸುಂದರತ್ತಿಗೆ ಅನ್ನಲೂ ಬೇಡ. ಒಂದೂ ಬೇಡ. ರಂಗೂ ಹಾಗೆ ಸುಂದರಿ ಅಂತಲೇ ಕೂಗೆ.

**ವಿಶಾಲಾಕ್ಷಿ.**—ಮಾತು ತಿರುಗಿಸಿದರೆ ನನಗೂ ತಿಳಿಯುತ್ತೆ. ನೀನು ಆ ಹಾಡು ಹೇಳಿದರೇ ನಾನು ಹಸೆಗೆ ಬರೋದು.

**ಲಕ್ಷ್ಮಮ್ಮ.**—ಏನು ಹಾಡು ಹೇಳೋದೋ ಅಮ್ಮ! ಈ ಪದ್ಧತಿ ತಪ್ಪಿಸಿ, ಓಲಗ ಊದಿಸಿ ಆರತಿ ಮಾಡಬೇಕು.

**ವಿಶಾಲಾಕ್ಷಿ.**—(ನಕ್ಕು ಚಪ್ಪಾಳೆ ಹೊಡೆಯುತ್ತ) ಒಳ್ಳೇ ಅಜ್ಜಿ! ಇವರ ಮಗಳಿಗೆ ಧ್ವನಿ ಚೆನ್ನಾಗಿಲ್ಲ, ಆ ಹಾಡು ಬರಲಿಲ್ಲ ಅಂತ, ಹಾಡು ಹೇಳೋದೇ ಬಿಟ್ಟುಬಿಡಬೇಕಂತೆ. ಸುಂದರತ್ತಿಗೆ ಹೇಳಲಿ, ಆ ಹಾಡು ಸರಸ್ವತೀದೇವಿಯೂ ಕಿವಿಗೊಟ್ಟು ಕೇಳ್ತಾಳೆ ಬೇಕಾದರೆ.

**ಲಕ್ಷ್ಮಮ್ಮ.**—ಕಾವೇರಮ್ಮನೋರೆ, ಅತಿರೇಕಕ್ಕೆ ಬಂತು. ನನಗೆ ಅವಮಾನಮಾಡಬೇಕೂ ಅಂತ ಮಾತನಾಡಿಕೊಂಡು ಎತ್ತರವಾಗಿ ಕುರ್ಚಿ ಮೇಲೆ ಕೂರಿಸಿದಿರೋ ಏನೋ! ಚೆನ್ನಾಗಿದೆ. ಧ್ವನಿ ಚೆನ್ನಾಗಿದ್ದು ನನ್ನ ಮಗುವೇನೂ ನಾಟ್ಯ ಕಟ್ಟಬೇಕಾಗಿಲ್ಲ. ಏಳೇ ಮಗು, ಮನೆಗೆ ಹೋಗೋಣ.

**ಕಾವೇರಮ್ಮ.**—ಮಕ್ಕಳ ಮಾತಿಗೆ ದೊಡ್ಡವರು ಹೋಗಬಾರದು.

**ಲಕ್ಷ್ಮಮ್ಮ.**—ಮಕ್ಕಳಂತೆ, ಮಕ್ಕಳು! ಒಳ್ಳೇ ಮಕ್ಕಳು. ಧರ್ಮವೆಲ್ಲಾ ಹಾಳಾಗಿ ಹೋಯಿತು. ನೇಮವಿಲ್ಲ, ಆಚಾರವಿಲ್ಲ, ಶಾಸ್ತ್ರವಿಲ್ಲ. ಅರಿಸಿನ ಕುಂಕುಮವಿಲ್ಲದ ಸಕೇಶಿ ಸುಂದರಿ, ಮುತ್ತೈದೆಯರ ಮಧ್ಯ ಸುಗ್ಗಿ ಮಗೂನ ಹಸೆಮೇಲೆ ಕೂರಿಸಿದಳಲ್ಲ, ಹೀಗೆ ಮಾಡಬಹುದೆ? ಇದೇನು ಈ ಅನಾಚಾರ, ಈ ಅತಿರೇಕ? ನೀವು ಹೇಳಿ ಅಕ್ಕಯ್ಯಮ್ಮನೋರೆ. ನಿಮ್ಮ ಯಜಮಾನರು ದೊಡ್ಡ ಶಾಸ್ತ್ರಿಗಳು.

**ಅಕ್ಕಯ್ಯಮ್ಮ.**—ಇಂಥ ಕಡೆಗೆ ನಾವು ಬರಬಾರದಾಗಿತ್ತು. ನಾವೆಲ್ಲಾ ಇರೋವಾಗ ಅರಿಸಿನ ಕುಂಕುಮವಿಲ್ಲದ ಸಕೇಶಿ ಮಗುವನ್ನ ಒಳಗಿನಿಂದ ಕರೆತಂದು ಹಸೆಮೇಲೆ ಕೂರಿಸಿದ್ದಾಳೆ. ಹುಡುಗೀನ ಈಗ ಕರೀತಾ ಇದ್ದಾಳೆ.

**ಸುಬ್ಬಮ್ಮ.**—ಸುಮ್ಮನಿರಿ ಅಕ್ಕಯ್ಯಮ್ಮನವರೆ; ಪಾಪ, ಅವಳೇನು ಅರಿಸಿನ ಕುಂಕುಮ ಬೇಡ ಅಂದಳೆ?

**ಲಕ್ಷ್ಮಮ್ಮ.**—ದೇವರು ಕಿತ್ತುಕೊಂಡಮೇಲೆ ತೆಪ್ಪಗೆ ಬಿದ್ದಿರಬೇಕು. ಈ ಪಾರಪತ್ಯವೇಕೆ? ದೊಡ್ಡವರಿಗೆ ಎದುರು ಹೇಳೋದೇಕೆ? ರಾಮನಿಗೆ

ಸೀತೆ ಎರಡನೇ ಹೆಂಡತಿಯಲ್ಲವಂತೆ. . . . ಶಾಸ್ತ್ರ, ಧರ್ಮ ಎಲ್ಲಾ ಮುಳುಗಿ ಹೋಗ್ತಾ ಇದೆ. ಹಾಳು ಕಲಿಗಾಲ.

**ಅಕ್ಕಯ್ಯಮ್ಮ.**—ನಿಜ ಅಂದರೆ. ಅರಿಸಿನ ಕುಂಕುಮವಿಲ್ಲದ ಸಕೇಶಿಯರು ಎದುರಿಗೆ ಬಂದರೆ ಹೋದ ಕೆಲಸವೇ ಆಗೋದಿಲ್ಲವಂತೆ.

**ಕಾವೇರಮ್ಮ.**—ಆ ಮಗು ಸಂಕಟ ನಿಮಗೆ ತಿಳಿದಿದ್ದರೆ, ಅದರ ಸ್ವಭಾವ ನೀವು ಅರಿತಿದ್ದರೆ, ನೀವು ಹೀಗೆ ಹೇಳುತ್ತಿರಲೇ ಇಲ್ಲ. (ಗದ್ಗದ ಸ್ವರದಿಂದ) ದೇವರೇ ನಮ್ಮ ಸುಂದರೀಗೆ ಅನ್ಯಾಯ ಮಾಡಿದ. (ಕಣ್ಣೊರಸಿಕೊಳ್ಳುವಳು.)

**ಸುಂದರಿ.**—ಅಳಬೇಡ ಅತ್ತೆ. ಕತ್ತು ಕುಯ್ದುಬಿಟ್ರೂ ಸೋರೆಬುರುಡೆ ಅನ್ನಿಸಿಕೊಂಡು ನನಗೆ ಸಾಕಾಗಿದೆ. ಏನೋ ಅಜ್ಜಿಯೊಬ್ಬರು ಅಂದುಕೊಳ್ಳಲಿ ಅಂತ ಸುಮ್ಮನಿದ್ದರೆ, ಎಲ್ಲರೂ ಅನ್ನೋರೇ ಆಗಿದ್ದಾರೆ.

**ಕಾವೇರಮ್ಮ.**—(ವಿಶಾಲಾಕ್ಷಿಯನ್ನು ಹಸೆಯಮೇಲೆ ಕುಳ್ಳಿರಿಸಿ) ಹಸೆಗೆ ಕರೆದ ಹಾಡನ್ನು ಹೇಳಿ ಅಂದರೆ, ಯಾರಾದರೂ ಹೇಳಿ.

**ವಿಶಾಲಾಕ್ಷಿ.**—ಅಮ್ಮ, ಸುಂದರತ್ತಿಗೆ ಹೇಳಲಮ್ಮ.

(ಸುಂದರಿಯು ಕಣ್ಣೊರಸಿಕೊಂಡು ದೂರವಾಗಿ ಕುಳಿತುಕೊಳ್ಳುವಳು.)

**ಲಕ್ಷಮ್ಮ.**—ನಿಮ್ಮ ಸುಂದರತ್ತಿಗೆ ಅರಿಸಿನ ಕುಂಕುಮದ ಭಾಗ್ಯ ಕೇಳಿಬಂದಿಲ್ಲ. ಅವಳು ಹೇಳುವಹಾಗಿಲ್ಲ. ಸುಮ್ಮನಿರು.

(ಒಬ್ಬ ಮುತ್ತೈದೆಯು ಹಸೆಗೆ ಕರೆದ ಹಾಡನ್ನು ಹೇಳುವಳು.)

**ಕಾವೇರಮ್ಮ.**—(ಬದರಿಯನ್ನೆರೆದ ಹಾಡನ್ನು* ಹೇಳುತ್ತ ಅದು ಮುಗಿಯುತ್ತಿರುವಲ್ಲಿ ಎಲಚಿಹಣ್ಣನ್ನೂ, ಕಾಸುಗಳನ್ನೂ ಮಕ್ಕಳ ತಲೆಯಮೇಲಕ್ಕೆ ಬೆಳ್ಳಿಯ ಬಟ್ಟಲಿನಿಂದ ಎರೆದು) ಸುಖವಾಗಿ ಬಾಳಿ, ಕಂದಗಳ! (ಆರತಿ ತಟ್ಟೆಯನ್ನು ತೆಗೆದುಕೊಂಡು)

---

* ಫಲವನೆರೆದರೂ ಬದರಿ ಫಲವನೆರೆದರೂ ॥ ಪಲ್ಲವಿ ॥

ಉತ್ತರಾಯಣ ಹಬ್ಬವೆಂದು । ಉತ್ತಮಾ ತರುಣೀರು ಬಂದೂ ।
ಚಿತ್ತಜನಯ್ಯನ ಶಿರವಿ ತಾವು । ಸೂರ್ತಿ ಮುತ್ತು ಹವಳ ಬೆರಸಿ ॥ ೧ ॥

ಅಬ್ಜಗಂಧಿನೀರೆಲ್ಲರು ಬಂದು । ಗೆಜ್ಜೆಕಾಲ್ಗಡಗದವನ ಕಂಡು ।
ಮೂರ್ಜಗದ ಕೃಷ್ಣನ ಎತ್ತಿ ಕೂಡಿಸಿ । ಮುತ್ತು ಹವಳ ಬೆರಸಿ ಬದರೀ ॥ ೨ ॥

ಬಾ, ಸೀತಮ್ಮ, ಆರತಿಯೆತ್ತೋಣ. ಯಾರಾದರೂ ಹಾಡು ಹೇಳಿ, ಅಂದರೆ (ಒಬ್ಬ ಮುತ್ತೈದೆಯು "ಆರತಿಯೆತ್ತಿರೆ ನಾರಿಯರೆಲ್ಲರು" ಎಂಬ ಹಾಡನ್ನು ಹೇಳುವಳು. ಕಾವೇರಮ್ಮನೂ ಸೀತಮ್ಮನೂ ಆರತಿಯೆತ್ತುವರು.)

(ತೆರೆಯು ಬೀಳುವುದು.)

---

## ದೃಶ್ಯ ೨

[ಶಾಮಣ್ಣನ ಮನೆಯಿಂದ ಊರಿನ ಇತರ ಭಾಗಗಳಿಗೆ ಹೋಗುವ ದಾರಿ. ಲಕ್ಷ್ಮಮ್ಮನೂ, ಸೀತಮ್ಮನೂ, ಸುಬ್ಬಮ್ಮನೂ, ಇತರ ಮುತ್ತೈದೆಯರೂ ಪ್ರವೇಶಿಸುವರು. ಅವರ ಕೈಯಲ್ಲಿ ವೀಳೆಯದೆಲೆಗಳೂ, ಅಡಿಕೆಯೂ, ಎರಡೆರಡು ಬಾಳೆಹಣ್ಣುಗಳೂ ಇರುವುವು.]

**ಸುಬ್ಬಮ್ಮ.**—ಇನ್ನೇನು ಉತ್ಸವ ಬರುವ ಸಮಯ. ಇಲ್ಲೇ ನಿಂತಿದ್ದು ಅದನ್ನೂ ನೋಡಿಕೊಂಡು ಒಂದೇ ಸಲ ಮನೆಗಳಿಗೆ ಹೊರಟುಹೋಗೋಣ.

**ಲಕ್ಷ್ಮಮ್ಮ.**—ಇವರ ಮನೆಯೇ ಹಾಳಾಗ! ಎಷ್ಟು ಅವಮಾನ ಮಾಡಿದರು! ಈ ಹೊತ್ತು ನಮ್ಮ ಮನೆಯವರು ಬದುಕಿರಬೇಕಾಗಿತ್ತು ನೋಡಿ. ಇವರಿಗೆ ತಕ್ಕ ಶಾಸ್ತಿಮಾಡೋರು.

**ಸೀತಮ್ಮ.**—ಅಮ್ಮಾ, ನಿನಗೆ ಕೋಪ ಬಂದರೆ ತೀರಿತು. ಆಡಿದ ಮಾತಿಗೆ ಏನು ಅರ್ಥ ಅನ್ನೋ ಪರಿಜ್ಞಾನವೇ ಇರುವಹಾಗಿಲ್ಲ. ಅಪ್ಪ ಬದುಕಿದ್ದರೆ ಆ ಕಥೆಯೇ ಬೇರೆಯಾಗಿರುತ್ತಿತ್ತು.

**ಲಕ್ಷ್ಮಮ್ಮ.**—ಆಗಲಿ, ಕಲಿಗಾಲ. ಚೋಟುದ್ದದ ಹಿಳ್ಳೆಗಳೂ ತಾಯಿಗೆ ವಿವೇಕ ಹೇಳೋ ಹೊತ್ತು ಬಂತು. ಏನೆ ಸೀತು, ನಾನು ಆಡಬಾರದ ಮಾತು ಆಡಿದ್ದು. ಅರ್ಥ, ತಾತ್ಪರ್ಯ, ಮಗ್ಗಿಕೋಷ್ಟಕ, ಅಮರ, ಎಲ್ಲಾ ಹೇಳು. ಆ ಹಾಳು ಮನೆಯಲ್ಲಿ ನನ್ನ ಹೊಟ್ಟೆ ಉರಿಸಿದರು. ಕುದಿಯುವ ಹೊಟ್ಟೆಗೆ ಕಾಸಿದ ಸೌಟು ಅದ್ದಿ ನೀನು ಒಗ್ಗರಣೆಹಾಕು.

**ಸೀತಮ್ಮ.**—ಅಮ್ಮಾ, ನೀನು ಬೈದರೂ ಸರಿಯೆ. ನೀನು ಹಿಂದು ಮುಂದು ಸಲ ಸಲವೂ "ಅರಿಸಿನ ಕುಂಕುಮ, ಅರಿಸಿನ ಕುಂಕುಮ" ಎಂದು ಮಾತನಾಡಿ ಹಗರಣಮಾಡಿದ್ದು ತಪ್ಪು.

**ಲಕ್ಷ್ಮಮ್ಮ.**—(ರೋಷಭರದ ಧ್ವನಿಯಲ್ಲಿ ಹೀಯಾಳಿಸುವ ಭಂಗಿಯಿಂದ ಎಳೆದೆಳೆದು ಮಾತನಾಡುತ್ತ) ನನ್ನದೇ ತಪ್ಪೇ . . . . ನನ್ನದೇ ತಪ್ಪೇ . . . . ನೀನೇ ನನ್ನ ಜೀವ ಅಂತ ಸಾಕಿದ್ದಕ್ಕೆ ಸಾರ್ಥಕವಾಯಿತು.

**ಸುಬ್ಬಮ್ಮ.**—ಬೀದೀಲಿ ನಿಂತುಕೊಂಡು ಈ ಮಾತೆಲ್ಲಾ ಬೇಡಿ, ಲಕ್ಷ್ಮಮ್ಮನವರೇ, ಯಾರಾದರೂ ಕೇಳಿಯಾರು.

**ಲಕ್ಷ್ಮಮ್ಮ.**—ಯಾರು ಬೇಕಾದರೂ ಕೇಳಲೇಳಿ. ಅಂಥ ಕಳ್ಳತನ ವೇನಂತೆ. ಹೇಳಿ ನಮ್ಮಮ್ಮ, ನನ್ನ ತಪ್ಪು ಇನ್ನೂ ಏನೇನಿದೆಯೋ, ಒಕ್ಕಣಿಸಮ್ಮ. ಅದೆಲ್ಲಾ ಕೇಳಿ, ಹೆತ್ತ ಹೊಟ್ಟೆಗೆ ಹಾಲು ಹೊಯ್ಕೋ ತೀನಿ. ಆ ಹಾಳು ಸುಂದರಿ ಅಂದದ್ದೆಲ್ಲೋ ಹೋಯಿತು, ಇವಳ ಭಾಗಕ್ಕೆ.

**ಸೀತಮ್ಮ.**—ಹೀಗೆಲ್ಲಾ ಬಯ್ಯಬಾರದಮ್ಮ. ಸುಂದರಿ ಎಷ್ಟು ಗುಣವಂತೆ. ಅವಳೆದುರಿಗೆ ಅರಿಸಿನ ಕುಂಕುಮದ ಹೆಸರನ್ನೆತ್ತಿ ನೀನು ಮಾತಾಡಿದ್ದು ತಪ್ಪು.

**ಲಕ್ಷ್ಮಮ್ಮ.**—(ಕೋಪದಿಂದ) ಕುಲಕ್ಕೇ ಮೃತ್ಯು ಕೊಡಲಿಕಾವು. ಸರಿ. ನಾನು ಅವಳಿಗೆ ಅರಿಸಿನ ಕುಂಕುಮವಿಲ್ಲ ಅನ್ನಬಾರದಾಗಿತ್ತು. ಇನ್ನುಮೇಲೆ ಸಕೇಶಿಯರೆಲ್ಲಾ ಅರಿಸಿನ ಕುಂಕುಮ ಹಚ್ಚಿಕೊಂಡು ಹೂಮುಡಿದುಕೊಂಡು ಅಡಿಕೆಲೆ ಅಗೀತಾ ಹಸೆಮೇಲೆ ಕೂತುಕೊಂಡು ಆರತಿಯೆತ್ತಿಸಿಕೊಳ್ಳಬೇಕು ಅನ್ನು.

**ಸೀತಮ್ಮ.**—ನಾನು ನಿಜ ಹೇಳಿಬಿಡೋದೆ. ನೀನು ನನ್ನ ತುಂಬ ಪ್ರೀತಿಸುವುದನ್ನೂ ನಾನು ಬಲ್ಲೆ. ಆದರೂ. . . .

**ಲಕ್ಷ್ಮಮ್ಮ.**—ನಾನು ನಿನ್ನ ಪ್ರೀತಿಸಿ ಹಾಳಾದೆಕಣೆ. . . . "ಆದರೂ ಆದರೂ" ಅಂದೆಯಲ್ಲ. ಅದೇನಿದೆಯೋ ಆ ಗೊದ್ದದ ಗೂಡೇನೂ ನನ್ನ ತಲೆಮೇಲೆ ಒದರಿಬಿಡು.

**ಸೀತಮ್ಮ.**—ಅಮ್ಮಾ, ಕೋಪಿಸಿಕೋಬೇಡಮ್ಮ, ಬೇಡಿಕೋತೀನಿ. ನನ್ನಲ್ಲಿ ನಿನಗೆ ಎಷ್ಟು ಪ್ರೀತಿಯಿದೆಯೆನ್ನೋದನ್ನು ನಾನು ಬಲ್ಲೆ. ಆದರೂ, ನಿಧಾನವಾಗಿ ಯೋಚಿಸಿ ನೋಡು. ಕಾವೇರಮ್ಮನವರು ಸುಂದರೀನೂ

ನನ್ನೂ ಮುತ್ತೈದೆಯರ ಜೊತೆಗೆ ಹೋಗಿ ಕೂತುಕೊಳ್ಳಿ ಅಂತ ಹೇಳಿದಾಗ ನಾನು ಹೊರಟುಹೋದೆ. ಸುಂದರಿ ಅನುಮಾನಿಸುತ್ತಾ ನಿಂತೇ ಇದ್ದಳು. ಕಾವೇರಮ್ಮನವರು ಹೇಳಿದ್ದೇ ಸಾಕೆಂತ ಅವಳು ಅಲ್ಲಿ ಹೋಗಿ ಕೂತು ಕೊಳ್ಳಲೇ ಇಲ್ಲ. ಕಾವೇರಮ್ಮನವರು ಮತ್ತೆ ಬಲವಂತಮಾಡಿ ಹೇಳದೆ ಹೋಗಿದ್ದರೆ ಅವಳು ಕೂತುಕೊಳ್ಳುತ್ತಲೇ ಇರಲಿಲ್ಲ. ನೀನು ಮಾತೆತ್ತಿದರೆ "ಅರಿಸಿನ ಕುಂಕುಮ, ಅರಿಸಿನ ಕುಂಕುಮ" ಎಂದು ಹೇಳಿ ಸುಂದರಿ ಮನಸ್ಸಿಗೆ ಮರಣ ಸಂಕಟವಾಗುವಹಾಗೆ ಮಾತನಾಡಿದೆ.

**ಲಕ್ಷಮ್ಮ.**—ಹಾಗೇ ಆಗಲಿ. ನಾನೇ ಕೆಟ್ಟೋಳು. ಅವಳು ಮುತ್ತೈದೆಯರ ಗುಂಪಿಗೆ ಹೋಗಿ ಕೂತುಕೊಂಡದ್ದು ಸರಿಯೋ?

**ಸೀತಮ್ಮ.**—ನೀನೂ ಅಲ್ಲೇ ಕೂತಿರಲಿಲ್ಲವೇನಮ್ಮ? ಕೂತರೇನಂತೆ?

**ಲಕ್ಷಮ್ಮ.**—ನಾನು ದೂರವಾಗಿ ಕುರ್ಚಿಮೇಲೆ ಕೂತಿದ್ದೆ.

**ಸೀತಮ್ಮ.**—ಅವಳೂ ಯಾವ ಮುತ್ತೈದೆ ಬೆನ್ನಿನಮೇಲೂ ಕೈಹಾಕಿ ಕೊಂಡು ಕೂತಿರಲಿಲ್ಲ. ಏಂಗಡವಾಗೇ ಕೂತಿದ್ದಳು. ನೀನೂ ಸಿಕ್ಕಿದ ಹಾಗೆ ಅಂದೆ. ಆ ಅಕ್ಕಯಮ್ಮನವರೂ "ಅರಿಸಿನ ಕುಂಕುಮ" ಅಂತ ಏನೇನೋ ಅಂದರು. (**ಅಕ್ಕಯ್ಯಮ್ಮನು ಆ ಮಾತುಗಳು ಕಿವಿಯಮೇಲೆ ಬೀಳುತ್ತಿರುವಲ್ಲಿ ದಢದಢನೆ ಪ್ರವೇಶಿಸಿ, ಕಾಲು ನಡಿಗೆ ವೇಗಮಾಡಿ, ಎಡವಿ "ಅಯ್ಯೋ" ಎಂದು ಕೆಳಗೆ ಕುಳಿತುಕೊಳ್ಳುವಳು.**) ಏನಾಯಿತು, ಏನಾಯಿತು ಅಕ್ಕಯ್ಯಮ್ಮನವರೇ, ಏನಾಯಿತು?

**ಅಕ್ಕಯ್ಯಮ್ಮ.**—(ಮೇಲಕ್ಕೆದ್ದು) ನೋಡುತ್ತಲೇ ಇದ್ದೀಯೆ. ನಿನ್ನ ಬೆಡಗು ಬಿನ್ನಾಣ ಹೇಳು. ನೀನು ನನ್ನ ಬಯ್ಯೋದು ಕೇಳೋಣ ಅಂತ ಬೇಗ ಬೇಗ ಹೆಜ್ಜೆ ಇಟ್ಟು ಬಂದೆ. ಎಡವಿದೆ. ನೀನು ಖಂಡಿತ ಆ ತಾಯಿಗೆ ತಕ್ಕ ಮಗಳಲ್ಲ. ಆ ಹಾಳು ಸುಂದರಿ, ನಾನು ಮಧ್ಯಾಹ್ನ ನೀನೀರಿನ ಭಾವಿಗೆ ಹೊರಟಾಗಲೇ ಎದುರಿಗೆ ಸಿಕ್ಕಿದ್ದಳು. ಸಕೇಶಿ ನನ್ನೆದುರಿಗೆ ಬಂದ ಫಲ ಆಗಲೇ ತೋರಿಸಬಹುದು ಅಂತ ದಿಗಿಲಾಗಿತ್ತು. ವಿಧಿ ಈಗ ತೋರಿಸಿತು ಅದರ ಫಲ.

**ಲಕ್ಷಮ್ಮ.**—(ನಗುತ್ತ) ಧರ್ಮದ ಮಾತು ಅಂದರೆ ಅದೀಗ ಧರ್ಮದ ಮಾತು. ಅಕ್ಕಯ್ಯಮ್ಮನವರೇ, ಅರುಂಧತಿ ಹಾಗಿದ್ದೀರಿ ನೋಡಿ. ನನಗೆ ತಾನೆ ಏನಾಗಬೇಕು, ಹೇಳಿ. ಪೂರ್ವ ಸಂಪ್ರದಾಯಕ್ಕೆ ಸರಿಯಾಗಿರೋ ರೆಲ್ಲಾ ನನಗೆ ಬೇಕು. ಸಂಪ್ರದಾಯಕ್ಕೆ ಯಾರಾದರೂ ತಪ್ಪಿ ನಡೆದರೆ ನನಗೆ ಸಂಕಟ.

**ಸುಬ್ಬಮ್ಮ.**—ಅಕ್ಕಯ್ಯಮ್ಮನವರೇ, ನಿನ್ನೆ ನೀವು ಎಡವಿದ್ದಿರಾ?

**ಅಕ್ಕಯ್ಯಮ್ಮ.**—ನಿನ್ನೆ ಏಕೆ ಎಡವಲಿ? ಇಲ್ಲಮ್ಮಾ, ಇಲ್ಲ. ಅದೇಕೆ ಹಾಗೆ ಕೇಳಿದಿರಿ?

**ಸುಬ್ಬಮ್ಮ.**—ಇನ್ನೇನೂ ಇಲ್ಲ. ನಿನ್ನೆ ನೀವು ನೀನೀರು ಭಾವಿಗೆ ಹೊರಟಾಗ ನಾನೂ ಲಕ್ಷಮ್ಮನವರೂ ಎದುರಿಗೆ ಬಂದಿದ್ದೆವಲ್ಲಾ. ನೀವು ನಿನ್ನೆಯೂ ಎಡವಿದಿರೋ ಹೇಗೋ, ಲಕ್ಷಮ್ಮನವರು ಎದುರಿಗೆ ಬಂದ ಫಲವೂ ಹೀಗೇ ನಿನ್ನೆ ತೋರಿಸಿತ್ತೋ ವಿಧಿ ಅಂತ ಕೇಳಿದೆ.

**ಲಕ್ಷಮ್ಮ.**—(ಕೋಪದಿಂದ ಹುಬ್ಬು ಗಂಟಿಕ್ಕಿ) ಅಬ್ಬ! ಸುಬ್ಬಮ್ಮನವರೆ, ನೀವು ಸಾಮಾನ್ಯ ಅಂತಿದ್ದೆ. ನೀವು ನಾಳೆಯಿಂದ ನಮ್ಮ ಮನೆಗೆ ಮಜ್ಜಿಗೆಗೆ ಬರಬೇಡಿ.

**ಸುಬ್ಬಮ್ಮ.**—ಬೇಡವೇ ಬೇಡ. ಎರಡೂ ಮೂರೂ ದಿನದ ಹುಳಿ ಮಜ್ಜಿಗೆ, ಅದೂ ಎಮ್ಮೆಯ ಹುಳಿ ಲೊಡ್ಡು ಮಜ್ಜಿಗೆ ಕೊಡ್ತೀರಿ. ನಾನೇ ಬೇಡ ಅನ್ನಬೇಕು ಅಂತಿದ್ದೆ. ಇನ್ನೂ ಆ ಮಹಾರಾಯಿತಿ ಇಂದಿರಮ್ಮ ನವರ ಗುಣ ಹೇಳಿ. ಅವರು ನಮ್ಮ ಮನೆಗೆ ಮೊಸರು ಕೊಡ್ತಾ ಇದ್ದರು. "ಕೊಟ್ಟರೆ ಒಳ್ಳೆ ಪದಾರ್ಥ ಕೊಡಬೇಕು, ಇಲ್ಲದಿದ್ದರೆ ಕೊಡಲೇಬಾರದು" ಅನ್ನೋರು. ಅವರ ಕೈಯೇ ಧಾರಾಳ ಅಂದರೆ ಆ ಮುದ್ದು ಹುಡುಗಿ ಸುಂದರಿ. "ಇನ್ನೂ ಕೊಡಮ್ಮ, ಇನ್ನೂ ಕೊಡಮ್ಮ, ಅವರ ಮನೇಲಿ ನಮ್ಮ ಮನೆಗಿಂತ ಜನ ಹೆಚ್ಚು" ಎನ್ನೋಳು.

**ಲಕ್ಷಮ್ಮ.**—ಇಂದಿರೆಯೇ ಹೆಚ್ಚು ತಾನೆ. ಪಾಪ! ಈಗಲೂ ಅವಳ ಹತ್ತಿರವೇ ಹೋಗಿ, ಮೊಸರು ತೆಗೆದುಕೊಂಡು ಬನ್ನಿ.

**ಸುಬ್ಬಮ್ಮ.**—(ಕೋಪದಿಂದ) ಹೋಗುವಾಗ ನಿಮ್ಮನ್ನ ಕೇಳಿ ಹೋಗೋದಿಲ್ಲ. ನೀವೇ ಮುಂಚೆ ಹೋಗ್ತೀರೋ ನಾನೇ ಮುಂಚೆ ಹೋಗ್ತೇನೋ ಯಾರು ಬಲ್ಲರು? ಪಾಪ! ತಾಯಿ ಕಳೆದುಕೊಂಡ ತಬ್ಬಲಿ ಹುಡುಗಿ, ಗಂಡನೂ ಇಲ್ಲದ ಕಂದ, ಅದರಮೇಲೆ ಇವರ ಪಾರಪತ್ಯ. ನೀವು ನಿನ್ನೆ ಎದುರಿಗೆ ಬಂದಿರಲ್ಲ. ಅಕ್ಕಯ್ಯಮ್ಮ ಎಡವಿದರೇನು?

**ಅಕ್ಕಯ್ಯಮ್ಮ.**—ಸುಬ್ಬಮ್ಮನವರೆ! ಧರ್ಮಸೂಕ್ಷ್ಮ ನನಗೆ ತಿಳಿದ ಹಾಗೆ ನಿಮಗೆ ತಿಳಿಯೋದಿಲ್ಲ; ಸುಮ್ಮನಿರಿ. ಲಕ್ಷ್ಮಮ್ಮನವರೇನು ನಕೇಶಿಯೆ? ಪಾಪ! ಅವರು ಗಂಗಾಭಾಗೀರಥಿಗೆ ಸಮಾನ. ಅವರು ಒಂದಲ್ಲ ಹತ್ತುಸಲ ಎದುರಿಗೆ ಬಂದರೂ ಏನೂ ಆಗೋದಿಲ್ಲ. (ಸುಂದರಿಯು ಪ್ರವೇಶಿಸಿ ಆಶ್ಚರ್ಯದಿಂದ ನಿಲ್ಲುವಳು. ಮಾತಿನ ಅವಾಂತರದಲ್ಲಿ ಯಾರೂ ಅವಳ ಕಡೆಗೆ ನೋಡುವುದಿಲ್ಲ.) ಮಧ್ಯಾಹ್ನದಲ್ಲಿ ಆ ಹಾಳು ಸುಂದರಿ ಎದುರಿಗೆ ಬಂದಳು. ನಕೇಶಿ ಎದುರಿಗೆ ಬಂದ ಫಲ ಈಗ ವಿಧಿ ತೋರಿಸಿತು. ನಾನು ಎಡವಿ ನೋವಿನಿಂದ ಕಿರುಗುಟ್ಟಿ ಹೋದೆ. ಮಧ್ಯಾಹ್ನ ಅವಳನ್ನು ನೋಡಿದ್ದಕ್ಕೆ ಭಾವೀಗೆ ಬೀಳಬೇಕಾಗಿತ್ತು. ಸದ್ಯ ಇಷ್ಟರಲ್ಲೇ ಪರ್ಯವಸಾನವಾಯಿತು.

**ಸುಬ್ಬಮ್ಮ.**—ಯಾರಿಗೆ ಯಾವ ಹೊತ್ತಿಗೆ ಏನು ಬರುತ್ತೊ! ಇನ್ನೊಬ್ಬರನ್ನ ಅನ್ಯಾಯವಾಗಿ ಅನ್ನಬಾರದು. ಪಾಪ! ಆ ಹುಡುಗಿ ಸುಂದರಿ ನೂರುಸಲ ನನ್ನೆದುರಿಗೆ ಬಂದಿದೆ. ಎಂದೂ ನಾನು ಎಡವಿಲ್ಲವಲ್ಲ. ಅದಕ್ಕೇನು ಹೇಳ್ತೀರಿ?

**ಸುಂದರಿ.**—(ಮುಂದೆ ಬಂದು) ಬನ್ನಿ ಅಕ್ಕಯ್ಯಮ್ಮನವರೆ! ನೀರಿಗೆ ಹೊರಡಿ. ಊರೋರೆಲ್ಲಾ ಹೊರಡಿ. ನಾನು ಎದುರಿಗೆ ಬರ್ತೀನಿ. ಒಂದು ಸಲ ಬಂದದ್ದಕ್ಕೆ ಎಡವಿದಿರಲ್ಲಾ. ಹತ್ತುಸಲ ಬಂದು ನೋಡಿಯೇ ಬಿಡೋಣ. ಈ ಊರಿನಲ್ಲಿ ಯಾರು ಯಾರು ಎಷ್ಟೆಷ್ಟುಸಲ ಭಾವಿಗೆ ಬಿದ್ದು ಎಷ್ಟೆಷ್ಟು ಜನಕ್ಕೆ ಪ್ರಾಣ ಹೋಗುತ್ತೋ ನೋಡೋಣ. ನಮ್ಮ ಅತ್ತೆ ಕೈಯಲ್ಲಿ "ಕಾವೇರಮ್ಮನವರೆ, ಬಾಯಿತಪ್ಪಿ ಅಂದುಬಿಟ್ಟೆ ಸುಂದರೀನ" ಅಂತ ಸಮಾಧಾನ ಹೇಳಿದ್ದೂ ಹೇಳಿದ್ದೆ. ಈಗ ಇಲ್ಲಿ ಸುಂದರಿ ಪುರಾಣ ಓದಿದ್ದೂ ಓದಿದ್ದೆ. ಅಜ್ಜಿ, ನಿಮ್ಮ ಕಾಲಿಗೆ ಬಿದ್ದು ಕೇಳಿಕೊಳ್ಳುತ್ತೀನಿ.

ಮನೆಯಲ್ಲಿ ಎಷ್ಟು ಬೇಕಾದರೂ ಅನ್ನಿ. ಬೀದೀಲಿ ಪಂಚಾಯಿತಿ ಬೇಡ. ನನ್ನ ವಸ್ತು, ನನ್ನ ದೇವರು, ಅದೊಂದು ಪದಾರ್ಥ ಉದುಕಿದ್ದಿದ್ದರೆ! (ಅಳುತ್ತ ಹೋಗುವಳು.)

**ಸೀತಮ್ಮ.**—ಸುಬ್ಬಮ್ಮನವರೆ, ಅವಳ ಮುಖ ಹುಚ್ಚು ಹುಚ್ಚಾಗಿತ್ತು. ಏನೋ ದಿಗಿಲಾಗುತ್ತೆ. ಸಮಾಧಾನ ಮಾಡೋಣ. ಪಾಪ!

**ಸುಬ್ಬಮ್ಮ.**—ಚಿಕ್ಕವಯಸ್ಸಿನ ಹುಡುಗಿ. ದುಡುಕಿಯಾಳು. ನಡಿ, ತಾಯಿ. (ಸುಬ್ಬಮ್ಮನೂ ಸೀತಮ್ಮನೂ ಹೋಗುವರು.)

**ಲಕ್ಷಮ್ಮ.**—ಅಕ್ಕಯ್ಯಮ್ಮನವರೆ, ಈ ಕಲಿಗಾಲದಲ್ಲಿ ನೀವೊಬ್ಬರು ಕೃತಯುಗದ ಹೆಂಗಸಮ್ಮ, ನೋಡಿ. ಅಯ್ಯೋ, ನನ್ನ ಹೊಟ್ಟೇಲಿ ಹುಟ್ಟಿದ ಹೂವೇ ನನ್ನ ಸುಡುವ ಬೆಂಕಿಯಾಗಬೇಕೇನಮ್ಮ? ಮಗಳೇ ಹೀಗಾದ ಮೇಲೆ ನನ್ನ ಆಶೆ ಇನ್ನೆಲ್ಲಿ. (ಗದ್ಗದ ಸ್ವರದಿಂದ) ಅಯ್ಯೋ, ಹೊಟ್ಟೆ ಉರಿ ನೋಡಿ, ಅಯ್ಯೋ. (ಬಿಕ್ಕಿ ಬಿಕ್ಕಿ ಅಳುವಳು.)

**ಅಕ್ಕಯ್ಯಮ್ಮ.**—ಬೇಡಿ, ಬೇಡಿ. ಸೀತಮ್ಮನಿಗೆ ಬುದ್ಧಿ ಕಲಿಸೋರಂತೆ. ಅವಳು ಇನ್ನೂ ಹುಡುಗಿ. ಅಳಬೇಡಿ ಅಂದರೆ. ಅಯ್ಯೋ ನೀವು ಮಡಿಯೋ ಏನೋ. ನಾನು ಮುಟ್ಟಿ ಸಂತೈಸೋ ಹಾಗೂ ಇಲ್ಲ. ಅಳಬೇಡಿ. ನಮ್ಮ ಮನೆ ರಗಳೆ ಏನಂತೀರಿ? ನಾನು ಹೇಳುವ ಸಂಪ್ರದಾಯದ ಮಾತೇ ನಮ್ಮ ಮನೆಯವರಿಗೆ ಸರಿಬೀಳುವುದಿಲ್ಲ.

**ಲಕ್ಷಮ್ಮ.**—ಇದೇನು ಬಂತಮ್ಮಾ ಗ್ರಹಚಾರ? ನಿಮ್ಮ ಮಾತು ಸರಿಬೀಳದೆ ಇದ್ದಮೇಲೆ ಅಂಥವರು ಮನುಷ್ಯರೇ ಅಲ್ಲ. ಏನಂತೆ ನಿಮ್ಮ ಯಜಮಾನರಿಗೆ ಸರಿಬೀಳದೆ ಇರೋದು?

**ಅಕ್ಕಯ್ಯಮ್ಮ.**—ಅವರ ತಂಗಿ ಇದ್ದಾಳಲ್ಲ, ಅವಳ ಗಂಡ ಹೋಗಿ ಆಗಲೇ ನಾಲ್ಕೈದು ವರುಷವಾಯಿತು. ಅವಳಿಗೆ ಕೂದಲು ತೆಗೆಸಿ ಮಡಿ ಹಿಡಿಸಿ ಅಂತ ನಾನೆಷ್ಟು ಹೇಳಿದರೂ ಒಪ್ಪಿಲ್ಲ. ಸಕೇಶಿ ತಲೆಯಿಂದ ಒಂದು ತೊಟ್ಟು ನೀರು ತೊಟ್ಟಿಕ್ಕಿದರೆ, ಗಂಡನಿಗೆ ಯುಗ ಯುಗಾಂತರದವರೆಗೆ ನರಕವಂತೆ. ನಾನು ಈ ಧರ್ಮಸೂಕ್ಷ್ಮ ಹೇಳಿದರೆ ನಮ್ಮ ಮನೆಯವರಿಗೆ ಸರಿಬೀಳದೆ ರೇಗಿ ರೇಗಿ ಹಾರಾಡ್ತಾರೆ.

**ಲಕ್ಷಮ್ಮ.**—(ಸಂತೋಷದಿಂದ ಹಿಗ್ಗಿ) ಅಕ್ಕಯ್ಯಮ್ಮನವರೇ, ನನಗೆ ನಿಮ್ಮ ಸ್ನೇಹವಾದ ಘಳಿಗೆ ಎಂಥ ಒಳ್ಳೇದೋ ನೋಡಿ. ನೀವು ಈಗ ಆಡಿದ ಮಾತು ಮುತ್ತಿನಂಥ ಮಾತು. ಸುಂದರೀಗೂ ಮಡಿಮಾಡಿಸಿ ಬಿಡಬೇಕು, ನೋಡಿ. ಅವಳ ಗಂಡನಿಗೂ ಎಷ್ಟು ನರಕ ಹಿಂಸೆಯಾಗುತ್ತಿದೆಯೋ ಏನೋ! ಪಾಪ, ತಪ್ಪಿಸಬೇಕು. ಧರ್ಮ ಕಾಪಾಡಬೇಕಮ್ಮ, ಧರ್ಮ ಕಾಪಾಡಬೇಕು. ಇರೋದೇ ಧರ್ಮ. ಅವಳು ಪೂರ್ವ ಸಂಪ್ರದಾಯಕ್ಕೆ ತಕ್ಕಹಾಗಿರಲಿ. ನಾನು ಅವಳನ್ನ ತುಂಬ ಪ್ರೀತಿಸುತ್ತೇನೆ.

**ಅಕ್ಕಯ್ಯಮ್ಮ.**—ನಿಜ, ನಿಜ. ಇರೋದೇ ಧರ್ಮ.

**ಲಕ್ಷಮ್ಮ.**—ಯಾರು ನೋಡಿ, ಆ ಇಂದಿರೆ ಹೊಗಳೋರೇ. ಅವರ ತಲೆಮೇಲೆಲ್ಲಾ ನಾನೂ ನನ್ನ ಮಗಳೂ ಕಳ್ಳಿಹಾಲು ಎರೆದಿರೋದೇನೋ ಕಾಣೆ. ಈ ಸುಬ್ಬಮ್ಮಂಗೆ ಮಜ್ಜಿಗೆ ಬೇಡವಂತೆ. ನಾನು ಕಲಗಚ್ಚಿಗೇ ಹಾಕ್ತೇನಿ. ಕೆರೆ ನೀರು ಕೆರೆಗೇ ಚೆಲ್ಲಿದಹಾಗೆ, ಎಮ್ಮೆ ಮಜ್ಜಿಗೆ ಎಮ್ಮೆ ಹೊಟ್ಟೆಗೇ ಹಾಕಿ ಪುಣ್ಯ ಕಟ್ಟಿಕೊಳ್ತೇನೆ. ಈ ಇಂದಿರೇನ ಹೊಗಳಿದರೆ ನನಗೆ ಮೈ ಚಿಟುಗುಟ್ಟುತ್ತೆ ನೋಡಿ. ನೀವು ಸರಿ. ಬಂಗಾರದಂಥವರು.

**ಅಕ್ಕಯ್ಯಮ್ಮ.**—ನಮ್ಮ ತಂದೆ ಒಳ್ಳೆ ಹದಿನಾರಾಣೆ ಜೋಯಿಸರು. ನಾನು ಅವರ ಮುದ್ದುಮಗಳು. ನಾನು ಗ್ರಹಗತಿ ಗುಣಿಸದೆ ಹೇಳ್ತೇನೆ ಕೇಳಿ. ಎಲ್ಲರಿಗೂ ನಿಮ್ಮನ್ನ ಕಂಡರೆ ಹೊಟ್ಟೆಕಿಚ್ಚು. ಹೊಟ್ಟೆ ಉರಿ.

**ಲಕ್ಷಮ್ಮ.**—ಅದೀಗ ಮಾತು. ನಮ್ಮ ಹುಡುಗಿಗೆ ಬುದ್ಧಿ ಕಲಿಸಬೇಕು. ಸುಂದರೀಗೆ ಮಡಿ ಹಿಡಿಸಬೇಕು. ನಮ್ಮ ನೀತು ಗಂಡನಿಗೆ ಬೇಗ ಹೇಳಬೇಕು. (ತುತ್ತೂರಿಯ ಧ್ವನಿಯೂ, ಓಲಗದ ಧ್ವನಿಯೂ ಕೇಳಿಬರುವುವು.) ಉತ್ಸವ ಬರುತ್ತಿದೆ. ನೋಡಿಕೊಂಡು ಹೋಗೋಣ. (ಹೋಗುವರು.)

---

## ದೃಶ್ಯ ೩

[ಶಾಮಣ್ಣನ ಮನೆ. ಮೊದಲನೆಯ ದೃಶ್ಯದಂತೆಯೇ ಇರುವುದು. ಶಾಮಣ್ಣನೂ ಕಾವೇರಮ್ಮನೂ ಪ್ರವೇಶಿಸುವರು.]

**ಶಾಮಣ್ಣ.**—(ಚಿಂತಾಕ್ರಾಂತನಾಗಿ) ಇಷ್ಟು ರಗಳೆ ನಡೆಯಿತೇ ಹಾಗಾದರೆ! ಪಾಪ! ಆ ಹುಡುಗಿಗೆ ಸುಖವಿಲ್ಲ. ಅಕ್ಕ ಇದ್ದಾಗ ಅವಳನ್ನ ಎಷ್ಟು ಸುಖದಿಂದ ಸಾಕಿದ್ದಳೋ ಈಗ ಅಷ್ಟೂ ಅಷ್ಟು ಕಷ್ಟ ಬಂದಿದೆ. ಭಾವನಂತು ಆ ಲಕ್ಷ್ಮಮ್ಮನ ಬಾಯಿಗೆ ಅಂಜಿಕೊಂಡು ಅವಳ ಕೈಯಿನ ಸೂತ್ರದ ಬೊಂಬೆಯಾಗಿ ಬಿಟ್ಟಿದ್ದಾನೆ. ಮಕ್ಕಳೆಲ್ಲಿ?

**ಕಾವೇರಮ್ಮ.**—ಆಗಲೆ ಹೇಳಿದೆನಲ್ಲ. ಸಾವಿತ್ರಮ್ಮನವರ ಮಗಳಿಗೆ ಗುಲೇಬಕಾವಳಿ ಅಲಂಕಾರ ಮಾಡಿದ್ದಾರಂತೆ. ಅದನ್ನ ನೋಡೋದಕ್ಕೆ ಹೋಗಿದ್ದಾರೆ ಅಂತ. ನನ್ನೂ ಕರೆದಿದ್ದರು. ಸುಂದರಿ ಅತ್ತುಕೊಂಡು ಮನೆಗೆ ಹೋದಳು. ಅದನ್ನು ನೋಡಿ ನನಗೆ ಅವರ ಮನೆಗೆ ಹೋಗೋಕೆ ಮನಸ್ಸು ಬರಲಿಲ್ಲ.

**ಶಾಮಣ್ಣ.**—(ಆಲೋಚನಾ ಮಗ್ನನಾಗಿ) ಇವರ ದುಂದು ಖರ್ಚಿಗೆ ಆಸ್ತಿ ಯೆಲ್ಲಾ ಕರಗ್ತಾಬಂತು . . . . ಸಾಲ ಹೆಚ್ಚಾಯಿತು. ಇನ್ನೂ ಆಸ್ತಿಯಿದೆ, ಬೇಕಾದಷ್ಟಿದೆ. ಆದರೂ ಲಕ್ಷ್ಮಮ್ಮನ ದುಂದುಗಾರಿಕೆಗೆ ಕುಬೇರನ ಭಂಡಾರವೂ ಕರಗಿ ಹೋಗದೆ ನಿಲ್ಲುವಹಾಗಿಲ್ಲ.

**ಕಾವೇರಮ್ಮ.**—ನೀವು ಏನೇ ಹೇಳಿ. ಏನೋ ಚಿಕ್ಕವಯಸ್ಸಿನಲ್ಲಿ ಹೆಂಡತಿ ಹೋದರೆ ಮದುವೆ ಮಾಡಿಕೊಳ್ಳಬಹುದು. ನಿಮ್ಮ ಭಾವನಷ್ಟು ವಯಸ್ಸಾದವರು ಖಂಡಿತ ಎರಡನೇ ಮದುವೆ ಮಾಡಿಕೊಳ್ಳಬಾರದು. ಮಾಡಿಕೊಂಡರೂ ಲಕ್ಷ್ಮಮ್ಮನವರಂಥ ಆತ್ತೆ ಮಾತ್ರ ಸಿಕ್ಕಿ ಮನೆ ಆಕ್ರಮಿಸಿ ಕೊಳ್ಳಬಾರದು, ನೋಡಿ.

**ಶಾಮಣ್ಣ.**—ಇವತ್ತು ನನ್ನ ಮನಸ್ಸೇ ಒಂದು ಒಗೆಯಾಗಿದೆ. ಆದರೆ ಒಂದು ಅವಿವೇಕಮಾಡಿಕೊಂಡೆ.

**ಕಾವೇರಮ್ಮ.**—ಏನು ಆ ಅವಿವೇಕ?

**ಶಾಮಣ್ಣ.**—ನಿನ್ನೆ ಭಾವ ಸಿಕ್ಕಿದ್ದ. ಈಗ ಕುಂಭಕೋಣಂ ಬಂದಿದ್ದಾರೆ, ನೋಡು. ಆತನ ಕೈಯಲ್ಲಿ ಕೆಲವು ವರದಾಚಾರಿ ಮಟ್ಟುಗಳೂ ತ್ಯಾಗರಾಜ ಕೃತಿಗಳೂ ಕೇಳಬೇಕಂತೆ. ನಮ್ಮ ಮನೆಯಲ್ಲಿ ಹಾಡಿಸು ಅಂದ. ಆಗಲಿ ಅಂದಿದ್ದೆ.

**ಕಾವೇರಮ್ಮ.**—ಅವರ ಮನೆ ದೇಶೋ ವಿಶಾಲವಾಗಿದೆ. ನಮಗಿಂತ ಹಣಗಾರರು. ನಮ್ಮ ಹಾಗೆ ತಾಪತ್ರಯವಿಲ್ಲ. ಅವರ ಮನೇಲೇ ಸ್ಥಳವಿಲ್ಲವೆ?

**ಶಾಮಣ್ಣ.**—ಅವರ ಮನೆ ಹಜಾರದಲ್ಲಿ ಮಾಡಿಸಿದರೆ, ಭಾವನ ಡಭಡ್ಡಾಳಿಕೆಗೆ ತಕ್ಕಹಾಗೆ ಹೆಚ್ಚು ಜನ ಕರೆದು ಕಾಫಿ ತಿಂಡಿ ಗಲಭೆಯೆಲ್ಲಾ ಆಗಬೇಕು. ಅದಕ್ಕೆಲ್ಲಾ ಅವರ ಅತ್ತೆ ಒಪ್ಪಲಿಲ್ಲವೇನೊ. ಅವಳು ದಂದು ಮಾಡಬಹುದು. ಭಾವ ದುಂದುಮಾಡಿದರೆ ಸುಮ್ಮನಿದ್ದಾಳೆ?

**ಕಾವೇರಮ್ಮ.**—(ನಕ್ಕು) ಇರಬೇಕು. ನನಗೆ ಸಾವೆಲ್ಲಿ ಒರುತ್ತೋ ಅಂತ ಭಯ. ನೀವೆಲ್ಲಿ ಎರಡನೇ ಮದುವೆಮಾಡಿಕೊಂಡು ಲಕ್ಷ್ಮಮ್ಮ ನವರಂಥ ಅತ್ತೆ ಪಡೆಯಬೇಕಾಗುತ್ತೋ ಅಂತ ದಿಗಿಲು. ಆದರೆ ನಿಮ್ಮ ಭಾವನ ಹಾಗೆ ನಿಮಗೆ ವಯಸ್ಸಾಗಿಲ್ಲ. (ನಗುತ್ತ) ನಾನು ಸತ್ತಮೇಲೆ ಅವರಷ್ಟು ವಯಸ್ಸಿನ ತನಕ ಕಾದಿದ್ದು ಮದುವೆ ಮಾಡಿಕೊಳ್ಳಬೇಡಿ. ಬೇಗ ಮದುವೆ ಮಾಡಿಕೊಂಡುಬಿಡಿ.

**ಶಾಮಣ್ಣ.**—ಥೂ, ಎಲ್ಲಿ ಹಾಳು ಮಾತು . . . . ಭಾವ ಎಲ್ಲಾರನ್ನೂ ಕರೆದುಕೊಂಡು ಬರೋದಕ್ಕೆ ಹೋಗಿದ್ದಾನೆ. ಸ್ವಲ್ಪ ಜನ ಒರ್ತಾರೆ.

**ಕಾವೇರಮ್ಮ.**—(ನೇಪಥ್ಯದೊಳಗಿನಿಂದ "ಸಮಯ ಹೇಗಿದಿರಿ ಶಾಮಣ್ಣ ನವರೇ; ಹಬ್ಬ, ಸಮಯ ಹೇಗಿದಿರೀ" ಎಂದು ಕೂಗಿಕೊಂಡುದನ್ನು ಕೇಳಿ ಅಸಹ್ಯದಿಂದ) ಛೆ! ಬೀದೀಲೇ ನಿಂತು ಈ ಕುಂಭಕೋಣಂ ಕೂಗೋದನ್ನ ನೋಡಿ. ಸಂಸಾರಿಗಳ ಮನೇಲಿ ಈ ಮಾತು ಆಡೋದೇ ಈತ. ಶುದ್ಧ ಪಟಿಂಗ ಅಂತ ಕಾಣುತ್ತೆ.

**ಶಾಮಣ್ಣ.**—ಸ್ವಲ್ಪ ಬಾಯಿ ಹೆಚ್ಚು . . . . ಒನ್ನಿರಿ ಕುಂಭಕೋಣಂ.

**ಕಾವೇರಮ್ಮ.**—(ನಕ್ಕು) ಯಾರೋ ಒಳ್ಳೆ ಹೆಸರಿಟ್ಟಿದ್ದಾರೆ, ಈತನಿಗೆ. ಕಾಫಿ ಮಾಡಲೆ?

**ಶಾಮಣ್ಣ.**—ಆಗಲಿ. ದೊಡ್ಡ ತಪ್ಪಲೆ ಇಟ್ಟು ಕಾಯಿಸು. (ಕುಂಭಕೋಣಂ ಪ್ರವೇಶಿಸಿದುದನ್ನು ಕಂಡು) ಬನ್ನೀ ಕುಂಭಕೋಣಂ. (ಕುರ್ಚಿ ತೋರಿಸಿ) ಕೂಡಿ. (ಕಾವೇರಮ್ಮ ನು ಹೋಗುವಳು.)

**ಕುಂಭಕೋಣಂ.**—ನನ್ನ ಹೆಸರು ಕುಂಭಕೋಣಂ ಅಲ್ಲಾ, ಶ್ರೀನಿವಾಸಯ್ಯ ಅಂತ. ಎಲ್ಲರೂ ನನ್ನ ಮೋಸಗಾರ ಅಂತ ಅಪಹಾಸ್ಯ ಮಾಡಿ "ಕುಂಭಕೋಣಂ" ಅಂತ ಕೂಗಿ ಅನ್ಯಾಯಮಾಡ್ತಿದ್ದಾರೆ. ನಮ್ಮ ಮೈಸೂರು ಸೀಮೆ ಜನಕ್ಕೆ ಬುದ್ಧಿಯೇ ಇಲ್ಲ. ನನ್ನಿಂದ ಎಷ್ಟು ಜನಕ್ಕೆ ಲೈಫ್ ಇನ್‌ಷ್ಯೂರೆನ್ಸ್ ಹಣ ಸಲೀಸಾಗಿ ಸಕಾಲದಲ್ಲಿ ಬಂದಿದೆ. ನಾನು ಇನ್‌ಷ್ಯೂರೆನ್ಸ್ ಏಜಂಟಾದಮೇಲೆ ಎಷ್ಟು ಜನದ ಕೈಯಲ್ಲಿ ಇನ್‌ಷ್ಯೂರೆನ್ಸ್ ಮಾಡಿಸಿ ಆಪತ್ಕಾಲಕ್ಕೆ ಅವರಿಗೆ ಹಣ ಒದಗುವ ಹಾಗೆ ಮಾಡಿದ್ದೀನಿ.

**ಶಾಮಣ್ಣ.**—ಅದರಿಂದ ನಿಮಗೂ ಸಂಪಾದನೆಯಿದೆಯಲ್ಲ. ಬೇಕಾದಷ್ಟು ಹಣ ಸಂಪಾದನೆ ಮಾಡ್ತೀರಿ; ಅಲ್ಲವೇ ಕುಂಭಕೋಣಂ?

**ಕುಂಭಕೋಣಂ.**—ಆ ಸಂಪಾದನೆಗೆ ಪಡುವ ಕಷ್ಟವೋ? ನೀವು ನನ್ನ "ಕುಂಭಕೋಣಂ" ಅಂತ ಕರೆಯಬೇಡಿ ಸ್ವಾಮಿ. ಶ್ರೀನಿವಾಸಯ್ಯ ಅಂತ ಕೂಗಿ. ಕುಂಭಕೋಣ ಎಂದರೆ ಮೋಸ ಅಂತ ಅಪಾರ್ಥ ಬಿದ್ದು ರಗಳೆಯಾಗಿದೆ.

**ಶಾಮಣ್ಣ.**—ಕುಂಭಕೋಣದಲ್ಲಿ ಒಳ್ಳೆಯವರೂ ಇದ್ದೇ ಇರಬೇಕಲ್ಲ. ಒಳ್ಳೆಯವರೂ ಇದ್ದೇ ಇದ್ದಾರೆ. (ವಿಶಾಲಾಕ್ಷಿಯೂ, ರಂಗುವೂ ಪ್ರವೇಶಿಸುವರು.)

**ಕುಂಭಕೋಣಂ.**—ಬಾ, ರಂಗು, ಇಲ್ಲಿ, ಬಾ ರಾಜ, ಬಾ ರಾಜ.

**ರಂಗು.**—ನನ್ನ ಹೆಸರು ರಾಜನಲ್ಲ, ರಂಗು.... ನಿಮ್ಮ ಹೆಬ್ಬೆಟ್ಟು ತೋರಿಸಿ. ಸುಣ್ಣವಾಗಿಲ್ಲದಿದ್ದರೆ ನಿಮ್ಮ ಹತ್ತಿರಕ್ಕೆ ಬರ್ತೀನಿ.

**ಶಾಮಣ್ಣ.**—ಅದೇಕೆ ರಂಗು ಹಾಗೆ ಹೇಳ್ತೀ? ಮಾವ, ಅಪ್ಪ, ಅವರು.

**ರಂಗು.**—ಇಲ್ಲಾ ಅಣ್ಣಾ. ಅಡಕೆಲೆ ಹಾಕಿಕೊಂಡು ಹೆಬ್ಬೆಟ್ಟು ಸುಣ್ಣವಾಗಿದ್ದರೇ ಅವರು ಕರೆಯೋದು. ಹೆಬ್ಬೆಟ್ಟಿನ ಸುಣ್ಣ ನನ್ನ ಅಂಗಿಗೆ

ತಿಕ್ಕೀ ತಿಕ್ಕೀ ಹೋಗಲಾಡಿಸಿಕೊಳ್ಳೋದೆ ಅವರ ಕೆಲಸ. ಎಷ್ಟೋಸಲ ಹಾಗೆಮಾಡಿದ್ದಾರೆ. ನಾನು ಬರೋದಿಲ್ಲ. ಹೆಬ್ಬೆಟ್ಟಿನ ಸುಣ್ಣಾ ನನ್ನ ಅಂಗೀಗೆ ತಿಕ್ಕಿ ಕೊಳೆಮಾಡ್ತೀರಿ.

**ಕುಂಭಕೋಣಂ.**—(ಹೆಬ್ಬೆರಳನ್ನು ತೋರಿಸಿ) ಈಗ ಸುಣ್ಣಾವಾಗಿಲ್ಲ. ಬಾ.

**ರಂಗು.**—ನೀವು ನೆಸ್ಯ ಹಾಕ್ತೀರಿ. ಹೆಬ್ಬೆಟ್ಟು ನೆಸ್ಯವಾಗದೆಯೋ ಏನೊ! ಯಾಕೋ ಏನೋ ನಿಮ್ಮ ಹತ್ತಿರಕ್ಕೆ ಬರಬೇಕೂ ಅಂದರೆ ಬ್ಯಾಡ ಅನ್ನಿಸತ್ತೆ. ನಾನು ಬರೋದಿಲ್ಲ. (ಒಳಕ್ಕೆ ಹೋಗುವನು.)

**ಶಾಮಣ್ಣ.**—(ರಾಮರಾಯನು ಮಿತ್ರಗೋಷ್ಠಿಯೊಡನೆ ಪ್ರವೇಶಿಸಿದುದನ್ನು ಕಂಡು) ಬಾ, ಭಾವ. ಎಲ್ಲರೂ ದಯಮಾಡಬೇಕು. ಕೂಡಬೇಕು. (ಎಲ್ಲರೂ ಕುಳಿತುಕೊಳ್ಳುವರು.)

**ರಾಮರಾಯ.**—ಬನ್ರೀ ಕುಂಭಕೋಣಂ. ಆ ಹಸೆಮಣೆಮೇಲೇ ಕೂತು ಹಾಡಿಬಿಡಿ.

**ಕುಂಭಕೋಣಂ.**—ನಾನೇನು ನಿಮ್ಮ ಸ್ನೇಹಿತನಾಗಿ ನಿಮ್ಮ ಮನೆಗೇ ಸೇರಿದವನಂತಿದ್ದೀನಿ. ಕುಂಭಕೋಣಂ ಅಂತಾದರೂ ಕೂಗಿ. ಕಂಚಿ ಗರುಡ ಅಂತಾದರೂ ಕೂಗಿ......ಹಸೆ ಹತ್ತಿರದ ದೀಪದ ಕಂಬಗಳಾದರೂ ತೆಗೆದರೆ, ಅಲ್ಲಿ ಕೂತು ಹಾಡಿಯೇನು. (ಎಲ್ಲರೂ ನಗುವರು.)

**ಶಾಮಣ್ಣ.**—(ನಕ್ಕು) ದೀಪದ ಕಂಬ ಇರಲೇಳಿ. ನಿಮಗೂ ಆರತಿ ಮಾಡಿದರಾಯಿತು. . . ಹೋಗಲಿ. ತೆಗೆಯೋಣ. (ಕಂಬಗಳನ್ನು ತೆಗೆಯುವನು.)

**ಕುಂಭಕೋಣಂ.**—(ಹಸೆಯ ಮಣೆಯ ಮೇಲಕ್ಕೆ ಬಂದು ಹಾರ್ಮೋನಿಯಂ ತೆಗೆದುಕೊಂಡು ಶ್ರುತಿಮಾಡುವನು.)

**ರಂಗು.**—(ಪ್ರವೇಶಿಸಿ ಚಪ್ಪಾಳೆ ಹೊಡೆದು) ಅಕ್ಕಾ, ಅಕ್ಕಾ, ಓಡಿ ಬಾ. ಕುಂಭಕೋಣಂ ಹಸೆಮೇಲೆ ಕೂತಿದೆ. ಕಂಬ ತಂದು ಮುಂದಿಡೋಣ, ಬಾ. (ಕುಣಿಯುತ್ತ) ಅಮ್ಮ ಇನ್ನೊಂದುಸಲ ಬಾಳೆಹಣ್ಣಿನ ಬಾಗಿನ ಕೊಡ್ತಾಳೆ. ನಂಗೆ ಬಾಳೆಹಣ್ಣು ಸಿಕ್ಕುತ್ತೆ. (ಎಲ್ಲರೂ ನಗುವರು.)

**ಶಾಮಣ್ಣ.**—(ಓಡಿಬಂದು ರಂಗುವನ್ನೆತ್ತಿಕೊಂಡು) ಹಾಗೆಲ್ಲಾ ಕೂಗ ಬಾರದು, ರಂಗು.

**ರಂಗು.**—ಕುಂಭಕೋಣಂ ನನ್ನ ಹಾಗೇ ಹಸೆಮೇಲೆ ಕೂತಿದೆ.

**ಶಾಮಣ್ಣ.**—ಇರಲಿ, ಬಾ. ನಿಮ್ಮ ತಾಯಿ ಅಡಿಗೆ ಮನೇಲಿ ಕಾಫಿ ಮಾಡ್ತಾ ಇದಾಳೆ. ಹೋಗು. (ರಂಗು "ಕಾಫೀನೇ, ಕಾಫೀನೇ" ಎಂದು ಮನೆಯೊಳಕ್ಕೆ ಓಡಿಹೋಗುವನು.) ಇನ್ನು ಹಾಡಿ, ಸ್ವಾಮಿ.

**ಕುಂಭಕೋಣಂ.**—ವರದಾಚಾರ್ರು ಹಾಡ್ತಿದ್ದಹಾಗೆ ನನಗೆ ಒರೋದಿಲ್ಲ.

**ರಾಮರಾಯ.**—ಬಂದಿದ್ದರೆ, ಹಸುರು ಮೊಕಮಲ್ಲಿನ ಅಂಗಿಹಾಕಿ ಹಣದ ರಾಶಿ ಮೇಲೆ ಕೂತುಕೊಳ್ತಿದ್ದಿರಿ. ಹೇಳಿರಿ. ನಿಮಗೆ ಅವರಹಾಗೆ ಒರುತ್ತೆ ಅಂತ ನಾವೂ ತಿಳಿದುಕೊಂಡಿಲ್ಲ.

(ಕಾವೇರಮ್ಮನು ಒಂದು ತಟ್ಟೆಯಲ್ಲಿ ಕಾಫಿ ಒಟ್ಟಲುಗಳನ್ನು ತರುವಳು. ಶಾಮಣ್ಣನು ಎಲ್ಲರಿಗೂ ಕೊಡುವನು.)

**ರಾಮರಾಯ.**—ಶಾಮಣ್ಣಾ! ಭಾರಿ ಏರ್ಪಾಡೇ ಇಟ್ಟುಬಿಟ್ಟೆ.

**ಶಾಮಣ್ಣ.**—ಹಾಸ್ಯ ಮಾಡಬೇಡ, ಭಾವ. ಸಂಗೀತಗಾರ್ರೇ! ನಿಮಗೆ ಎರಡು ಕಪ್ ಕಾಫಿ. (ಕೊಡುವನು.)

**ಕುಂಭಕೋಣಂ.**—ಆಗಲೇಳಿ. ಸಂಕೋಚ, ನಾಚಿಕೆ, ಇದೆಲ್ಲಾ ಇರುವವರು ಇನ್ಷ್ಯೂರೆನ್ಸ್ ಏಜಂಟಾಗಲಾರರು. ನಾನು ನಿಗರ್ವ ಶಿರೋಮಣಿ; ಆಗಲಿ. ಉಸಿರು ಹಿಡಿದು ಹಾಡಬೇಡವೆ? ಮೋಟಾರ್ ಕಾರಿಗೆ ಪೆಟ್ರೋಲ್ ಎಣ್ಣೆ ಹೇಗೋ, ಸಂಗೀತಗಾರರಿಗೆ ಕಾಫಿ ಹಾಗೆ. ಕನಿಷ್ಠಪಕ್ಷ ಎರಡು ಕಪ್ ಕಾಫಿಯಾದರೂ ಬೇಕೇಬೇಕು. (ಕಾಫಿಯನ್ನು ಕುಡಿದು "ರಾರಾಜಿಸಳೀಪರಿ ಸ್ತ್ರೀರೂಪದೆ ಮಾಧವೀ" ಎಂಬ ಹಾಡನ್ನು ಹೇಳುವನು. ಎಲ್ಲರೂ ತಲೆದೂಗುವರು.)

**ಲಕ್ಷಮ್ಮ.**—(ಕೈಯಲ್ಲೊಂದು ಗಾಜು ಒಡೆದ ಪಟವನ್ನು ಹಿಡಿದು ದಢದಢನೆ ಪ್ರವೇಶಿಸಿ) ನಡುವೇಲಿ ನಿಂತು ಕೇಳಿದೆ. ರಾರಾಜಿಸಬೇಕೊ, ಮಾಧವಿಯಾಗ

ಬೇಕೊ, ಒಳ್ಳೆ ಕಥೆ. ಮನೇಲಿ ದಾಂಧಲೆಯಾಗ್ತಾ ಇದೆ. ಸ್ವೈರಿಸೋ ಹಾಗೇ ಇಲ್ಲ.

**ರಾಮರಾಯ.**—ಇರಲಿ. ಬರ್ತೇನೆ. ಇಲ್ಲಿ ಅದೊಂದೂ ಬೇಡ.

**ಲಕ್ಷಮ್ಮ.**—ಅಲ್ಲಿಗೆ ಬಂದು ಎಲ್ಲಾ ಕೇಳಿ ಎಂದಿನಂತೆ "ಲೊಚ್ ಲೊಚ್" ಅನ್ನೋದು ಬೇಡ, ಧರ್ಮಕ್ಕೆ ಮುಚ್ಚುಮರೆ ಏನೂ ಇಲ್ಲ. ನಿಮ್ಮ ಮುದ್ದುಮಗಳು ಸುಂದರಿ ಅವಾಂತರ....

**ರಾಮರಾಯ.**—(ಎದ್ದುನಿಂತು ಸ್ವಲ್ಪ ಅಸಮಾಧಾನದಿಂದ) ಈಗ ಬೇಡ ಆ ಮಾತು.

**ಲಕ್ಷಮ್ಮ.**—(ಅಳುತ್ತ) ಯಾರು ನೋಡಿದರೂ ನನ್ನ ಛೀಗುಟ್ಟು ವವರೇ. (ಅಳುತ್ತ ನಿಲ್ಲುವಳು.)

(ಮಿತ್ರಗೋಷ್ಠಿಯವರೆಲ್ಲರೂ ಒಬ್ಬೊಬ್ಬರಾಗಿ ಎದ್ದು ಶಾಮಣ್ಣನನ್ನು ಬೀಳ್ಕೊಂಡು ಹೊರಟು ಹೋಗುವರು.)

**ಕುಂಭಕೋಣಂ.**—ಲಕ್ಷ್ಮಮ್ಮನವರೇ, ಹೀಗೆ ರಸಾಭಾಸಮಾಡಿದ್ದು ಸರಿಯಲ್ಲ. ಎಲ್ಲರೆದುರಿಗೂ ಗೃಹಕೃತ್ಯ ವಿಚಾರ ಹೀಗೆ ರಟ್ಟುಮಾಡಬಾರದು.

**ಲಕ್ಷಮ್ಮ.**—ನಮ್ಮ ಮನೆ ಮಾತು ನಮಗೆ ಜಡಿ. ರಟ್ಟೂ ಇಲ್ಲ. ಮಣ್ಣೂ ಇಲ್ಲ. ಗುಟ್ಟೂ ಗುಮಾನೀ ಅದೆಲ್ಲಾ ನನ್ನ ಹುಟ್ಟಿಗೇ ಬಂದಿಲ್ಲ.

**ಕುಂಭಕೋಣಂ.**—ಆದರೂ ಸ್ವಲ್ಪ ಕಲಿತರೆ ವಾಸಿ.

**ಲಕ್ಷಮ್ಮ.**—ನನಗೆ ಜನ್ಮಜನ್ಮಾಂತರಕ್ಕೂ ಅಂಥ ಗುಣ ಬರೋದೇ ಬೇಡ.

**ಸುಂದರಿ.**—(ಪ್ರವೇಶಿಸಿ) ಅಜ್ಜಿ, ನಿಮ್ಮ ಕಾಲಿಗೆ ಬೀಳ್ತೇನೆ. ನಮ್ಮ ಮನೆ ಮಾತು ನಮ್ಮ ಮನೆಯಲ್ಲಿರಲಿ. ಮನೆಗೆ ಬನ್ನಿ.

**ರಾಮರಾಯ.**—ಏನಮ್ಮ, ನೀನೂ ಸಹನದಿಂದ ನಡೆಯೋದಿಲ್ಲ; ಅವರಿಗೂ ಸ್ವೈರಣೆಯಿಲ್ಲ. ನನ್ನ ಪ್ರಾಣಕ್ಕೆ ಬಂದಿದೆ.

**ಲಕ್ಷಮ್ಮ.**—ನನಗೆ ಸ್ವೈರಣೆಯಿಲ್ಲದೇ ಇಲ್ಲ. (ಪಟವನ್ನು ತೋರಿಸಿ) ನೋಡಿ, ನೋಡಿ, ನಮ್ಮ ಸೀತು ಮದುವೇಲಿ ತೆಗೆಸಿದ ತಸ್ವೀರು. ಇದನ್ನ

ಇವಳು ಕಿತ್ತೆಸೆದು, ಗಾಜೆಲ್ಲಾ ಒಡೆದು ಚೂರುಮಾಡಿ, ಇಬ್ಬರ ಮುಖದ ಮೇಲೂ ಮಸಿಹುಯ್ದಿದ್ದಾಳೆ. ಎಲ್ಲರೂ ನೋಡಿ ಸಂತೋಷಪಡಿ. ಸಾವಿತ್ರಮ್ಮನವರ ಮನೆ ಗುಲೇಬಕಾವಳಿ ಅಲಂಕಾರ ನೋಡಿ ಒಂದಮೇಲೆ, ಇದನ್ನು ಕಂಡು ನನ್ನ ಮಗು ಎಷ್ಟು ಅಳುತ್ತೋ ಏನೊ! ಪಾಪ, ಪಾಪ!

**ಸುಂದರಿ.**—ಮಸಿ ಹುಯ್ದಿದ್ದು ಖಂಡಿತ ನಾನಲ್ಲ. (ರೋಷದಿಂದ) ಯಾರು ಹುಯ್ದರೋ ನಾನು ಕಾಣೆ. ಹುಯ್ದವರನ್ನೇ ಕೇಳಿ. ಬೆಳಗಿನಿಂದಲೂ ಬೈಗುಳದ ಮಾತು ಕೇಳಿ ಕೇಳಿ ನನಗೆ ಸಾಕಾಗಿದೆ. ಸಹನದಲ್ಲಿ ಅಮ್ಮನ ಹಾಗಾಗಬೇಕೆಂತ ನನಗೂ ಆಸೆ. ಆದರೆ ನಾಗಲಿಲ್ಲ.

**ಲಕ್ಷ್ಮಮ್ಮ.**—(ವ್ಯಂಗ್ಯವಾಗಿ) ಹೌದು ಕಣೆ, ನಿನಗೆ ಬಹಳ ಸಹನ. ತಪ್ಪೇರು ಪಟ ನಾನೇ ಕಿತ್ತೆಸೆದು ಗಾಜೂ ಒಡೆದು, ಅಳಿಯ ಮಗಳ ಮುಖಗಳಮೇಲೆ ಮಸಿ ಸುರಿದೆ, ಅಲ್ಲವೇನೇ? ನನ್ನ ಅಳಿಯ ಮಗಳ ಮುಖ ನೋಡೋಕೆ ನನಗೆ ಸಂಕಟ. ನನಗೆ ಪ್ರೀತಿಯಿಲ್ಲ. ಅದಕ್ಕೋಸ್ಕರ ನಾನೇ ಮಸಿ ಹುಯ್ದೆ, ಅಲ್ಲವೇನೆ?

**ಸುಂದರಿ.**—ಅದನ್ನ ಕೆಳಕ್ಕೆಸೆದು ನಾನು ಗಾಜು ಒಡೆದದ್ದು ನಿಜ. ಮಸಿ ಹುಯ್ದವಳು ನಾನಲ್ಲ.

**ಲಕ್ಷ್ಮಮ್ಮ.**—(ಪಟವನ್ನು ನೋಡಿ ನೋಡಿ) ಅಯ್ಯೋ, ಮಗಳೆ, ಅಳಿಯನೇ. ಮಸಿ ಬಳಿದಿರುವ ನಿಮ್ಮ ಮುಖಗಳನ್ನ ನೋಡಿ ಹೇಗಪ್ಪಾ ಹೊಟ್ಟೆ ಹಿಡಿಯಲಿ? (ಅಳುವಳು.)

**ಸುಂದರಿ.**—ಆ ಚಿತ್ರ ಏಕೆ ನೋಡಬೇಕು? ಮಗಳು ಅಳಿಯನ ಮುಖಗಳನ್ನೇ ನೋಡಿ ಸಂತೋಷಪಡಿ.

**ಲಕ್ಷ್ಮಮ್ಮ.**—ಅವಳೇ ಮಸಿ ಹುಯ್ದೋಳು, ಹೊಟ್ಟೆಕಿಚ್ಚಿನಿಂದ ಮಸಿ ಹುಯ್ದೋಳು ಅನ್ನೋದು ಈಗಲಾದರೂ ಗೊತ್ತಾಯಿತೆ? ಅಷ್ಟೇ ಅಲ್ಲ. ಇವರಮ್ಮ ಉಟ್ಟುಕೊಳ್ತಾ ಇದ್ದ ಜರತಾರಿ ಸೀರೆ ನನ್ನ ಮಗು ನೀತು ಉಟ್ಟುಕೊಳ್ಳಕೂಡದಂತೆ. ಆ ಸೀರೇನ ತನ್ನ ಪೆಟ್ಟಿಗೆಗೆ ಸೇರಿಸಿ ಬೀಗ ಹಾಕಿಬಿಟ್ಟಿದ್ದಾಳೆ. ನನ್ನ ಹೊಟ್ಟೆ ಉರಿ ಯಾವ ಆಲೇಮನೆ ದೈವಕ್ಕೆ ಹೇಳಿ

ಕೊಳ್ಳಲಿ? ಯಾವ ಅರಳೀಮರದ ದೆವ್ವಕ್ಕೆ ಹೇಳಿಕೊಳ್ಳಲಿ? (ಅಳುತ್ತ) ಮುಖ್ಯವಾಗಿ ನಮ್ಮ ಮಗು ಹಣೇಲಿ ಇಂಥ ಮನೆ ಸೇರೋದು ಬರೆದಿತ್ತು.

**ಸುಂದರಿ.**—ಮಸಿ ಹುಯ್ದೋಳು ಖಂಡಿತ ನಾನಲ್ಲ. ಇನ್ನು ಸೀರೆ ತೆಗೆದಿಟ್ಟದ್ದು. ಸೀರೆ ತೆಗೆದಿಟ್ಟದ್ದುಂಟು. ನನ್ನ ಹೊಟ್ಟೆ ಉರಿಸಿದಿರಿ. ನಾನು ಸೀರೆ ತೆಗೆದಿಟ್ಟೆ.

**ಲಕ್ಷಮ್ಮ.**—ಅಬ್ಬಬ್ಬಬ್ಬಬ್ಬ! ಎದುರೆದುರಿಗೇ ಸುಳ್ಳು ಹೇಳಿ ಬಾಯಿ ಬಡೀತಾಳೆ. ಮಾಡಿದ್ದರಲ್ಲಿ ಕೆಲವು ಒಪ್ಪಿಕೊಂಡು ಕೆಲವು ಬಿಡೋದೇಕೆ?

**ಸುಂದರಿ.**—ಮಸಿ ಹುಯ್ದೋಳು ಖಂಡಿತ ನಾನಲ್ಲ.

**ರಾಮರಾಯ.**—ಉಳಿದದ್ದು ತಾನೇ ನೀನು ಮಾಡಿದ್ದು ಸರಿಯೇ ನಮ್ಮ?

**ಲಕ್ಷಮ್ಮ.**—(ಸ್ವಲ್ಪ ಸಂತೋಷವನ್ನು ಸೂಚಿಸಿ) ಅದೀಗ ಮುತ್ತಿನಂಥ ಮಾತು. ಹೆಸರಿಗೆ ಸರಿಯಾದ ಮಾತು.

**ಸುಂದರಿ.**—ಈ ಬೇಳುವೆ ಮಾತಿಗೆ ಬೆರಗಾಗಬೇಡಣ್ಣಾ. ಅಣ್ಣಾ, ನನ್ನ ಮಾತು ಕೇಳಣ್ಣಾ. ನಡೆದದ್ದೆಲ್ಲಾ ಪೂರ್ತಿಯಾಗಿ ಕೇಳಣ್ಣಾ.

**ಲಕ್ಷಮ್ಮ.**—ನಿನ್ನ ಸುಳ್ಳು ಮಾತು ಕೇಳುವುದಕ್ಕೆ ಅವರಿಗೆ ಬೇಕಿಲ್ಲ.

**ಸುಂದರಿ.**—ನನ್ನ ಹೆಸರು ಹೇಳಿದವರೂ ಸುಳ್ಳು ಹೇಳುವುದಿಲ್ಲ. ಆ ಭ್ರಾಂತಿ ನಿನಗೇಕೆ?....ಅಣ್ಣಾ! ಈ ಹಾಳು ಪಂಚಾಯಿತಿ ಬೇಡಣ್ಣಾ. ನನಗೆ ಜೀವನವೇ ಭಾರವಾಗಿದೆ. ನನ್ನ ಬಾಳಿನ ಬೆಳಕು ದೇವರು ಕಿತ್ತುಕೊಂಡ. ಅದರ ಕೊರಗು, ರೋಗ, ಎರಡೂ ಸೇರಿ ಅಮ್ಮನೂ ಕಣ್ಣು ಮುಚ್ಚಿಕೊಂಡಳು. ಈ ಪಂಚಾಯಿತಿ ಬೇಡಣ್ಣಾ. ನೀನು, ಕರಿ, ಇಬ್ಬರೂ ಸುಖವಾಗಿದ್ದರೆ ಸಾಕು. ನನಗೆ ಒಂದೂ ಬೇಡ.

**ಲಕ್ಷಮ್ಮ.**—(ವ್ಯಂಗ್ಯದ ನಗುವಿನಿಂದ) ಸುಂದರಿ! ಸುಳ್ಳು ಹೇಳಿ ದಕ್ಕಿಸಿಕೊಳ್ಳೋಕೆ ಎಂಥ ನಾಟಕ ಕಟ್ಟಿ ಜನಗಳನ್ನ ಬೆರಗುಮಾಡ್ತೀಯೇ ನೀನು! ನಾಟಕಕಕ್ಕಾದರೂ ನೀರೆ. ಪಟಕ್ಕೆ ಮಸಿ ಹುಯ್ದೆ ಅಂತ ಒಪ್ಪಿಕೋ ಬಾರದೆ, ಹೇಳು.

**ಸುಂದರಿ.**—ಮಾಡಿದ್ದರೆ ಖಂಡಿತ ಒಪ್ಪಿಕೊಳ್ಳಬಹುದಾಗಿತ್ತು.

**ಶಾಮಣ್ಣ.**—ಲಕ್ಷ್ಮಮ್ಮನವರೆ, ಹೋಗಲಿ. ಬಿಡಿ.

**ಲಕ್ಷಮ್ಮ.**—ಅಯ್ಯೋ! "ಇದನ್ನ ಉಡಬೇಡ. ಇನ್ನೊಂದು ತರಿಸಿಕೋ" ಅಂತ ಹೇಳಿ ಮುನ್ನೂರು ರೂಪಾಯಿ ತಿಂದ ರೊಟ್ಟಿ ಅಂಚಿನ ಜರತಾರಿ ಪಪ್ಪಳಿ ಸೀರೆ ತೆಗೆದಿಟ್ಟುಬಿಟ್ಟಳಲ್ಲಪ್ಪಾ. ನೀವೇ ಹೇಳಿ. ಹೆಂಗಸರು ಹೀಗೆ ರಗಳೆಮಾಡಿದರೆ ಹೊರಗೆ ಹೋಗಿ ದುಡಿದು ಸಂಪಾದಿಸೋ ಗಂಡಸರಿಗೆ ಎಷ್ಟು ಕಷ್ಟ!

**ಶಾಮಣ್ಣ.**—ಏನೋ ಪಾಪ! ಚಿಕ್ಕವಯಸ್ಸು. ದುಡುಕುವುದು ಚಿಕ್ಕವರ ಸ್ವಭಾವ. ಕ್ಷಮಿಸುವುದು ದೊಡ್ಡವರ ಸ್ವಭಾವ.

**ಲಕ್ಷಮ್ಮ.**—ಗಂಡಸರು ಅಷ್ಟು ಹೇಳಿದಮೇಲೆ ನನ್ನಂಥ ಹೆಂಗಸರು ಛಲ ಹಿಡಿಯಬಾರದು.

**ಸುಂದರಿ.**—ನನ್ನ ಮಾತು ಪೂರ್ತಿ ಕೇಳಿ. ಆಮೇಲೆ ಯಾರು ಬೇಕಾದರೂ ನನ್ನನ್ನು ಛೀಗುಟ್ಟಿ. ಅಜ್ಜಿ ಮನೆಗೆ ಬಂದರು. ನಾನು ಹಜಾರದಲ್ಲಿ ಅಮ್ಮನ ತಸ್ವೀರು ತಗುಲಿಹಾಕಿ, ಅದರ ಸುತ್ತ ನನ್ನ ಕಸೂತಿ ಕೆಲಸಗಳಿಂದಲೂ, "ಕ್ರೋಷಾ" ಚೌಕಗಳಿಂದಲೂ, ಬೆಂಡು ಹೂವಿನ ದಂಡೆಗಳಿಂದಲೂ ಅಲಂಕಾರಮಾಡಿದ್ದೆ. ನಿಮಗೆಲ್ಲಾ ಗೊತ್ತೇ ಇದೆ. ಅಜ್ಜಿ ಮನೆಗೆ ಬಂದವರೇ "ಈ ಹಾಳು ಪಟಕ್ಕೇಕೆ ಇಷ್ಟು ಅಲಂಕಾರ? ಇದು ಇಲ್ಲಿರಬಾರದು" ಎಂದು ಹೇಳಿ ಪಟವನ್ನೂ, ಎಲ್ಲವನ್ನೂ ಕಿತ್ತೆಸೆದು ಗಾಜು ಒಡೆದು ಬಿಟ್ಟರು. ನಕ್ಷತ್ರಿಮಾಡಿದ ಅಲಂಕಾರವಂತೆ. ಅಮ್ಮನ ಸೀರೆ ಉಟ್ಟರೆ ಸೀತಮ್ಮನ ಹೊಟ್ಟೆಯಲ್ಲೂ ನನ್ನಂಥ ನೀಚ ಮಗಳು ಹುಟ್ಟುವುದು ಖಂಡಿತವೆಂತ ಗೊಣಗಿದರು. ನನಗೆ ಬಹಳ ಸಂಕಟವಾಯಿತು. ನಾನು ಈ ಪಟ ಕೆಳಕ್ಕೆಸೆದು, ಆ ಸೀರೆ ತೆಗೆದಿಟ್ಟೆ. ನಮ್ಮಮ್ಮ ಉಟ್ಟುಕೊಳ್ತಾ ಇದ್ದ ಸೀರೆ ನನಗೆ ಪೂಜ್ಯವಸ್ತು. ನನ್ನಂಥ ನಿರ್ಭಾಗ್ಯೆ ನನ್ನ ಶತ್ರುಗಳ ಹೊಟ್ಟೇಲೂ ಹುಟ್ಟಬೇಡ. ನಾನು ಮನಿಗಿಸ ಹುಯ್ಯಲಿಲ್ಲ. ಅಮ್ಮನ ಪಟ ಅಂದರೆ ನನ್ನ ಕಣ್ಣೆದುರಿಗೆ ಅಮ್ಮನೇ ಪ್ರತ್ಯಕ್ಷವಾಗಿ ಬಂದು ನಿಂತ

ಹಾಗೆ ನನಗೆ ಪ್ರೀತಿ. ಅದನ್ನ ಅಜ್ಜಿ ಕೆಳಕ್ಕೆಸೆದು ಅದರ ಗಾಜು ಒಡೆಯದೆ ಇದ್ದರೆ ಚೆನ್ನಾಗಿತ್ತು.

**ಲಕ್ಷ್ಮಮ್ಮ.**—(ಆರ್ಭಟದಿಂದ ಅಚ್ಚರಿಯನ್ನು ಸೂಚಿಸುತ್ತ) ಈ ವಯಸ್ಸಿಗೆ ಹೀಗೆ ಸುಳ್ಳು ಹೇಳೋದೇ! ರಾಮಾ, ರಾಮಾ, ದೇವರೇ ಕಾಪಾಡಬೇಕು. ಸುಂದರಿ, ಸುಂದರಿ, ಮಾಡಿದ ತಪ್ಪು ಮುಚ್ಚಿಕೊಳ್ಳೋಕೆ ಇಂಥ ಕೆಲಸಮಾಡಿ ಬಿಟ್ಟೆಯೇನೆ? ಅಯ್ಯೋ! ನಮ್ಮ ಸೀತು ಭಕ್ತಿಯಿಂದ ತನ್ನ ನವತಿ ಪಟಕ್ಕೆ ದಿನಾಗಲೂ ಬೆಳಗ್ಗೆ ಎದ್ದು ಕೈಮುಗಿಯೋಳಲ್ಲೇ. ತಪ್ಪಿಸಿಬಿಟ್ಟೆಯಾ? (ರಾಮರಾಯನನ್ನು ಸಂಬೋಧಿಸಿ) ಮೊದಲು ನಾಳೆಯೇ ಆ ಪಟಕ್ಕೆ ಗಾಜು ಹಾಕಿಸಿಕೊಡಿ. ಅಬ್ಬ, ಅಬ್ಬ, ಅಬ್ಬ, ನಾಟಕ ಬರೆಯೋರಿಗೂ ಇಷ್ಟು ಸುಳ್ಳು ಬರೋದಿಲ್ಲ. ಕಥೆ ಬರೆಯೋರಿಗೂ ಇಷ್ಟು ಸುಳ್ಳು ಬರೋದಿಲ್ಲ.

**ಕಾವೇರಮ್ಮ.**—(ಒಳಗಿನಿಂದ ಬಂದು) ನಂಜೇಲಿ ನೀವು ಸುಂದರೀನ ಅಂದೂ ಅಂದೂ ಗ್ರಹಚಾರಬಿಡಿಸಿದ್ದು?

**ಲಕ್ಷ್ಮಮ್ಮ.**—ನನಗೆ ಮುಂಗೋಪ ಹೆಚ್ಚು. ಅದು ನನ್ನ ಜಾಯಮಾನ. ನನ್ನ ಮಗಳು ಸೀತೂನ ಕೂಡ ನಾನು ಬಯ್ಯೋದೆ. ಹಿಂದಿನಿಂದ ಬಂದ ಧರ್ಮಕ್ಕೆ ಯಾರಾದರೂ ಲೋಪಮಾಡಿದರೆ ನನಗೆ ಸೈರಿಸೋದಿಲ್ಲ. ಸುಂದರಿ ಮಾಡಿದ್ದು ತಪ್ಪು. ಆದರೂ ಸುಂದರಿ, ಸುಂದರಿ, ಹೀಗೆ ಸುಳ್ಳು, ಮೋಸ, ನಟನೆ, ಇದು ಮಾತ್ರ ಬಿಟ್ಟುಬಿಡು. ನನಗೆ ನೀನು ಬೇರೆ, ಸೀತು ಬೇರೆಯೇನೆ?

**ರಾಮರಾಯ.**—ಇಬ್ಬರಲ್ಲಿ ಯಾರ ಮಾತು ನಿಜವೋ, ದೇವರೇ ಬಲ್ಲ.

**ಸುಂದರಿ.**—ನಾನು ಬೇರೆ ಸುಳ್ಳು ಹೇಳಿಲ್ಲ. (ಹೋಗುವಳು.)

**ಲಕ್ಷ್ಮಮ್ಮ.**—ನಾನು ಇಂಥ ಸುಳ್ಳು, ಇಂಥ ತಟವಟ, ನನ್ನ ಜನ್ಮದಲ್ಲಿಯೇ ನೋಡಿಲ್ಲ. ನಂಜೆ ನಾನು ನಾಲ್ಕು ಮಾತನಾಡಿದ್ದೇನೋ ನಿಜ. ಆದರೆ ಈ ಸುಂದರಿ ಹೀಗೆ ಸುಳ್ಳು ಹುಟ್ಟಿಸಿಬಿಡೋದೆ?

**ಕಾವೇರಮ್ಮ.**—"ಸುಕೇಶಿ, ಸುಕೇಶಿ" ಅಂತ ಬಹಳ ...ಾಗಿ ಆಡಿದಿರಿ.

**ಲಕ್ಷಮ್ಮ.**—ಅವಳು ಮುತ್ತೈದೆಯರ ಗುಂಪಿಗೆ ಬಂದದ್ದಕ್ಕೆ, ಅಲ್ಲಿ ಕೂತದ್ದಕ್ಕೆ, ಅಂದೆ. ಇರೋದೇ ಉಂಟಂತೆ; ಅನ್ನಬಾರದೆ? ನಿಜ ಆಡೋದೂ ತಪ್ಪೆ? ನಾನೇನಾದರೂ ಕೂದಲಿಟ್ಟುಕೊಂಡಿದ್ದು ನನ್ನ ಯಾರಾದರೂ ಸಕೇಶಿ ಅಂದಿದ್ದರೆ ನಾನು ಖಂಡಿತ ನನ್ನ ಕಣ್ಣಾಣೆಗೂ ಕೋಪಿಸಿಕೊಳ್ತಿರಲೇ ಇಲ್ಲ. ಈಗಿನ ಕಾಲದ ಅನಾಚಾರ ಮಾತ್ರ ನನಗೆ ಸರಿಬೀಳೋದಿಲ್ಲ. ಸುಂದರಿ ಕೂದಲು ತೆಗಿಸಿಕೊಂಡು ಆಚಾರವಾಗಿರಲಿ. ನನ್ನ ಹೊಟ್ಟೇಲಿ ಹುಟ್ಟಿದ ಮಗು ಹಾಗೆ ಕಾಪಾಡ್ತೀನಿ.

**ಕಾವೇರಮ್ಮ.**—(ಬೆಕ್ಕಸಬೆರಗಾಗಿ) ಈ ವಯಸ್ಸಿಗೇ ಅವಳಿಗೆ ಆ ವೇಷವೆ! ರಾಮಾ!

(ತೆರೆಯು ಬೀಳುವುದು.)

## ಎರಡನೆಯ ಅಂಕ

## ದೃಶ್ಯ ೧

[ರಾಮರಾಯನ ಮನೆಯಿಂದ ಅಕ್ಕಯ್ಯಮ್ಮನ ಮನೆಗೆ ಹೋಗುವ ದಾರಿ. ಲಕ್ಷ್ಮಮ್ಮನು ತನ್ನ ಹೊಟ್ಟೆಯೇ ಹಿಡಿಸಲಾರದಷ್ಟು ಸಂತೋಷದಿಂದ ಹಿಗ್ಗುತ್ತ ಬೇಗ ಬೇಗ ಹೆಜ್ಜೆ ಹಾಕುತ್ತ ಪ್ರವೇಶಿಸುವಳು. ಅಕ್ಕಯ್ಯಮ್ಮನು ಎದುರು ಪಾರ್ಶ್ವದಿಂದ ಆಲೋಚನಾ ಮಗ್ನಳಾಗಿ ತಲೆಯನ್ನು ಬೊಗ್ಗಿಸಿಕೊಂಡು ಮೆಲ್ಲಗೆ ಹೆಜ್ಜೆಯಮೇಲೆ ಹೆಜ್ಜೆಯನ್ನಿಡುತ್ತ ಪ್ರವೇಶಿಸುವಳು.]

**ಲಕ್ಷ್ಮಮ್ಮ.**—ಅಕ್ಕಯ್ಯಮ್ಮನವರೇ! (ಅಕ್ಕಯ್ಯಮ್ಮನು ನಿದ್ರೆಯಿಂದ ಎಚ್ಚೆತ್ತಂತೆ ತಲೆಯನ್ನೆತ್ತಿ ನಿಂತುಕೊಳ್ಳುವಳು.) ನಾನು ನಿಮ್ಮ ಮನೆಗೇ ಹೊರಟಿದ್ದೆ. (ಸಂತೋಷದಿಂದಲೂ, ಬೇಗಬೇಗ ನಡೆದುಬಂದ ಆಯಾಸದಿಂದಲೂ ದೀರ್ಘವಾಗಿ ಉಸಿರು ಬಿಟ್ಟು) ಸದ್ಯ ಇಷ್ಟು ದಿನದ ಮೇಲೆ ಒಪ್ಪಿದರಮ್ಮ....ನೀವು ಎಲ್ಲಿಗೆ ಹೊರಟಿದ್ದೀರಿ?

**ಅಕ್ಕಯ್ಯಮ್ಮ.**—ನಾನು ನಿಮ್ಮ ಮನೆಗೇ ಹೊರಟಿದ್ದೆ. ನಿಮ್ಮನ್ನ ಬಿಟ್ಟರೆ ನನಗೆ ಸಲಹೆ ಹೇಳುವವರು ಈ ಊರಿನಲ್ಲಿ ಯಾರಿದ್ದಾರೆ, ಹೇಳಿ.

**ಲಕ್ಷ್ಮಮ್ಮ.**—ಏನೋ ನಿಮ್ಮ ವಿಶ್ವಾಸ, ಅಮ್ಮ. ನನಗೂ ಅಷ್ಟೆ. ಈ ಊರಿನಲ್ಲಿ ನೀವೊಬ್ಬರು ಆಪ್ತರು.

**ಅಕ್ಕಯ್ಯಮ್ಮ.**—ಒಪ್ಪಿದರು, ಒಪ್ಪಿದರು, ಅಂದಿರಿ. ಕೊನೆಗೂ ನಿಮ್ಮ ಅಳಿಯ ಸುಂದರೀಗೆ ಕೂದಲು ತೆಗಸಿ ಮಡಿ ಹಿಡಿಸೋದಕ್ಕೆ ಒಪ್ಪಿದರೇನು? ಅವರನ್ನ ಒಪ್ಪಿಸೋದಕ್ಕೆ ನಿಮಗೆ ಬಹಳ ಕಷ್ಟವಾಗಿರಬೇಕು.

**ಲಕ್ಷ್ಮಮ್ಮ.**—ಕಷ್ಟವಾಯಿತು ಅಂತ ಕೇಳ್ತೀರ? ಸಂಕ್ರಾಂತಿ ಹಬ್ಬದ ದಿನ ಆ ಹಗರಣವಾಯಿತಲ್ಲ. ಅವತ್ತಿನಿಂದ ಇದುವರೆಗೂ ಬೋಧನೆಮಾಡಿ ಮಾಡಿ ಕೊನೆಗೆ ಕಾರ್ಯ ಸಾಧಿಸಿದೆ.

**ಅಕ್ಕಯ್ಯಮ್ಮ.**—ಅಷ್ಟು ಕಷ್ಟವಾಯಿತೆ?

**ಲಕ್ಷ್ಮಮ್ಮ.**—ಸೀತು, ಮಗಳು ಅನ್ನುವ ಅಭಿಮಾನ ನೋಡಿ. ಅವಳ ಸಂಸಾರ ನೆಟ್ಟಗಿದ್ದರೆ ಸಾಕು. ನನಗೆ ತಾನೆ ಸುಂದರಿ ಮೇಲೆ ಪ್ರೀತಿ

ಯಿಲ್ಲವೆ? ಅವಳ ಗಂಡನಿಗೆ ನರಕ ತಪ್ಪಿಸಬೇಕು ನೋಡಿ. ಅದಕ್ಕೋಸ್ಕರವೇ ನಾನು ಪೇಚಾಡೋದು. ಸುಂದರಿಗಿಂತ ಅವಳ ಗಂಡ ಹೆಚ್ಚು. ಅವಳ ಗಂಡನಿಗಿಂತ ಧರ್ಮ ಹೆಚ್ಚು. ಆ ಧರ್ಮ ಮುಳುಗಿಸಬಾರದು ಅಂತ ವಿಶ್ವಪ್ರಯತ್ನಮಾಡ್ತಾ ಇದ್ದೀನಿ. ನನಗೇನು ಬೇಕಾಗಿದೆ ಹೇಳಿ.

**ಅಕ್ಕಯ್ಯಮ್ಮ.**—ಸುಂದರಿ ಮಡಿಯಾಗೋದಕ್ಕೆ, ಏನಂತೆ ನಿಮ್ಮ ಅಳಿಯಂದಿರ ಆಕ್ಷೇಪಣೆ?

**ಲಕ್ಷಮ್ಮ.**—ಅವಳ ಚಿಕ್ಕ ವಯಸ್ಸು, ಅವಳ ರೂಪ, ಅವಳ ಕೂದಲು ಮಾರುದ್ದ ಇರೋದು, ಇದೆಲ್ಲಾ. ಅಳೆದು ಸುರಿದು ಕೊನೆಗೆ ಒಪ್ಪಿದರು. ಸುಂದರಿಗೆ ಕೂದಲು ಚೆನ್ನಾಗಿದೆ, ಉದ್ದವಾಗಿದೆ. ನಮ್ಮ ಹುಡುಗಿ ಜಡೆಗಿಂತ ಸುಂದರಿ ಜಡೆ ಬಹಳ ಉದ್ದ. ಆದರೂ ಏನು ಮಾಡೋದು ಹೇಳಿ. ಜಡೆ ಉದ್ದವಾಗಿದ್ದರೂ ಅದೃಷ್ಟ ತೀರ ಮೋಟಾಗಿದೆಯಲ್ಲ. ಇಷ್ಟಕ್ಕೂ ನನಗೆ ಅರಿಸಿನ ಕುಂಕುಮವಿದ್ದಾಗ ನನ್ನ ಜಡೆ ಹೇಗಿತ್ತು ಅಂತೀರಿ?

**ಅಕ್ಕಯ್ಯಮ್ಮ.**—(ಆಶ್ಚರ್ಯ ವಾರ್ತೆಯನ್ನು ಕೇಳಿದಂತೆ) ಹಾಗೆ, ನಿಜವಾಗಿ! ನಿಜವಾಗಿ!

**ಲಕ್ಷಮ್ಮ.**—ಹೌದಮ್ಮಾ ಅಂದರೆ! ನೋಡಿ, ಸುಳ್ಳು ಹೇಳಿದರೂ ಕೇಳ್ತೀರಿ, ನಿಜ ಹೇಳಿದರೂ ಕೇಳ್ತೀರಿ. ನಮ್ಮ ಯಜಮಾನರು ನನ್ನ ಜಡೆ ನಾಗರಹಾವಿನ ಹಾಗಿದೆ ಅಂತ ನನ್ನ "ನಾಗವೇಣಿ, ನಾಗವೇಣಿ" ಅಂತ ಕೂಗಿ ಆನಂದಪಡೋರು ನೋಡಿ. ಈಗ ನಾನು ಆ ಜಡೆ ನೆನೆದುಕೊಂಡು ಅತ್ತರೆ ಫಲವೇನು? ಅಥವಾ ಅಂಥ ಜಡೆ ಹೋಗುತ್ತಲ್ಲಾ ಅಂತ ಆಗ ಹಠಮಾಡಿದ್ದರೆ, ಧರ್ಮ ಉಳೀತಾ ಇತ್ತೊ? ಧರ್ಮ ಹೋದಮೇಲೆ ಏನಿದೆ ಹೇಳಿ.

**ಅಕ್ಕಯ್ಯಮ್ಮ.**—ನಿಜ, ನಿಜ........ಹೇಗೆ ಒಪ್ಪಿಸಿದಿರಿ ನಿಮ್ಮ ಅಳಿಯನ್ನ?

**ಲಕ್ಷಮ್ಮ.**—ಬಹಳ ಕಷ್ಟಪಟ್ಟೆ, ಬಹಳ ಕಷ್ಟಪಟ್ಟೆ. ಸಂಕ್ರಾಂತಿ ಹಬ್ಬದ ದಿನ ನಡೆದ ಮಾತು ನಿಮಗೆ ಗೊತ್ತಿಲ್ಲ. ನಮ್ಮ ಸೀತು ಕೂಡ

ಸುಂದರಿ ಕಡೆಗೇ ಹೇಳ್ತಿದ್ದಳು, ನೋಡಿ. ಅವಳ ತಪ್ಪೇರಿಗೆ ಮಸಿ ಹಾಕಿದೆ. ಸುಂದರಿಗೆ ತನ್ನ ಬಲತಾಯಿ ಸುಖ ಸ್ವೈರಣೆಯಿಲ್ಲ ಅಂತ ಸೀತು ತಲೆಗೆ ಉಪದೇಶ ತುಂಬಿದೆ. ಪದೇ ಪದೇ ಬಹಳ ವಿಚಾರಗಳು ತಿಳಿಸಿ ಸೀತು ಮನಸ್ಸು ತಿರುಗಿಸಿದೆ. ಸೀತು ಗಂಡನ ಮನಸ್ಸನ್ನು ತಿರುಗಿಸಬೇಕು ಅಂತ ಇನ್ನೂ ಕಷ್ಟಪಟ್ಟೆ. ಯುಗಾದಿ ಹಬ್ಬ ಕಳೆದು ನಾಲ್ಕು ತಿಂಗಳಾಯಿತು. ಇನ್ನೂ ಮುನ್ನೂ ಹೇಳಿ ಹೇಳಿ ಸಾಕಾಯಿತು. ಹಪ್ಪಳದ ಹಿಟ್ಟು ನಾದಿದ ಹಾಗೆ ಅವರ ಮನಸ್ಸನ್ನೇ ನಾದಿಬಿಟ್ಟೆ. ಈಗ ಸ್ವಾಮಿಗಳು ಬರುವ ಸುದ್ದಿ ಬೇರೆ ಬಂತು. ಮಠಮುದ್ರೆ ನೀಲಕಂಠಭಟ್ಟರ ಸಹಾಯವೂ ಒದಗಿತು. ಮನೇಲಿ ಸಕೇಶಿಯಿದ್ದರೆ ಸ್ವಾಮಿಗಳಿಗೆ ಪಾದಪೂಜೆ ಮಾಡೋಹಾಗಿಲ್ಲ. ಅಂತ ಹೇಳಿಸಿದೆ. ಪಾದಪೂಜೆ ನಡೆಯದೆಹೋದರೆ ಪೂರ್ವಕಾಲದಿಂದ ಬಂದಿರುವ ಮನೆತನದ ಮರ್ಯಾದೆಯೇ ಹೋಗುತ್ತೆ ಅಂತ ಅಳಿಯ ನಡುಗಿ ಹೋದರು.

**ಅಕ್ಕಯ್ಯಮ್ಮ.**—ಏನು ಬುದ್ಧಿಯಮ್ಮ, ನಿಮ್ಮದು! ಎಂಥ ಬುದ್ಧಿ!

**ಲಕ್ಷ್ಮಮ್ಮ.**—(ಸಂತೋಷದಿಂದ ಹಿಗ್ಗಿ) ಬುದ್ಧಿಯೂ ಇಲ್ಲ, ಒಂದೂ ಇಲ್ಲ. ಇನ್ನೊಂದು ಸಮಾಚಾರ ಹೇಳುವುದು ಮರೆತೆ. ಈ ಮಧ್ಯೆ ನನಗೆ ಸ್ವಲ್ಪ ಉಷ್ಣವಾಯು ಕೆರಳಿದಹಾಗಾಯಿತು. ಧರ್ಮವನ್ನು ಉದ್ಧಾರ ಮಾಡೋಣ ಅಂತ ಅದನ್ನೂ ಉಪಯೋಗಿಸಿಕೊಂಡೆ. ರೋಗವೆಂತ ಹಾಸಿ ಕೊಂಡು ಮಲಗಿದೆ. ನಾನು ಉಪವಾಸವಿದ್ದದ್ದನ್ನ ನೋಡಿ ಅಳಿಯ ಬಹಳ ವ್ಯಥೆಪಟ್ಟರು. ಅದೇ ಸಮಯ ಅಂತ ಇದ್ದದ್ದನ್ನ ಇದ್ದಹಾಗೆಯೇ ಹೇಳಿದೆ. "ಯಾರಿಗೆ ಯಾರು? ಸುಂದರಿಯಾದರೂ ಮಡಿಯಾಗಿದ್ದರೆ ಅನ್ನ ಕಾಣಬಹುದಾಗಿತ್ತು. ನನ್ನ ಕ್ಷೇಮ ಯಾರಿಗೆ ಬೇಕು" ಅಂತ ಚೆನ್ನಾಗಿ ಒದರಿದೆ....ಹೋಗಲಿ....ಕೊನೆಗೆ ಈಗ ಒಪ್ಪಿದರು. ಇಷ್ಟು ದಿನದ ಮೇಲಾದರೂ ಕಾರ್ಯ ಕೈಗೂಡಿತು.

**ಅಕ್ಕಯ್ಯಮ್ಮ.**—ನಿಮ್ಮ ಸಮಾನವಿಲ್ಲ. (ನಿಟ್ಟುಸಿರು ಬಿಟ್ಟು) ನಮ್ಮ ಮನೆಯವರು ಒಪ್ಪಲಿಲ್ಲವಲ್ಲಮ್ಮ. ಅವರ ತಂಗಿ ತಲೆಕೂದಲು ಹಾಗೇ ಇರಬೇಕಂತೆ. ಅವಳಿಗೆ ಇನ್ನೂ ಇಪ್ಪತ್ತು ಮೂರು ವರುಷ ವಯಸ್ಸಂತೆ.

ಚಿಕ್ಕವಳಂತೆ, ಅವಳು. ವೈದಿಕರು ಇಂಗ್ಲಿಷ್ ಓದಬಾರದಮ್ಮ. ಓದಿದರೆ ಹಾಲಿನ ಕೊಡಕ್ಕೆ ಹುಳಿಬಿದ್ದ ಹಾಗೆ. ಆ ವಿವೇಕಾನಂದನ ಚಿತ್ರ, ಅಂಗಿ ಹಾಕಿಕೊಂಡು, ಬಿರುಗಣ್ಣು ಬಿಟ್ಟುಕೊಂಡು ನಿಂತಿರುವ ಸಂನ್ಯಾಸಿ ಆ ವಿವೇಕಾನಂದನ ಚಿತ್ರವಿರೋ ಪುಸ್ತಕ ಓದಿ ಓದಿ ಅವರ ಮಿದುಳು ಕೆಟ್ಟುಹೋಗಿದೆಯಮ್ಮಾ. ಇನ್ನು ಸ್ವಲ್ಪ ದಿನ ಹೀಗೇ ಕಳೆದರೆ ಹುಚ್ಚೆಲ್ಲಿ ಹಿಡಿದೀತೋ ಅಂತ ನನಗೆ ಕಳವಳ. ಇವರನ್ನ ಬೆಂಗಳೂರು ಹುಚ್ಚಾಸ್ಪತ್ರೆಗೆ ಹಾಕಿ, ಆ ಪರಸ್ಥಳದಲ್ಲಿ ಪೇಚಾಡಬೇಕಾಗುತ್ತೋ ಏನೋ.

**ಲಕ್ಷಮ್ಮ.**—ಸುಂದರಿ ಅವಳಿಗಿಂತ ತುಂಬ ಚಿಕ್ಕವಳು. ಸುಂದರಿಗೆ ಮದುವೆ ಹಿಡಿಸಿದ ಮೇಲೆ, ನಿಮ್ಮ ಉದ್ದೇಶ ಈಡೇರುತ್ತೆ, ಸುಮ್ಮನಿರಿ. ಚಿಕ್ಕವಳಿಗೇ ಮದುವೆಯಾದಮೇಲೆ, ದೊಡ್ಡವಳಿಗೆ ಮದುವೆಯಾಗದೆ ಉಂಟೇ ಅಂತ ಎಲ್ಲರ ಕೈಯಲ್ಲೂ ಛೀಮಾರಿಯಾದರೆ ನಿಮ್ಮ ಯಜಮಾನರಿಗೆ ಬುದ್ಧಿ ಬರುತ್ತೆ.

**ಅಕ್ಕಯ್ಯಮ್ಮ.**—ನಮ್ಮ ತಂದೆ ಎಂಥ ಕರ್ಮಠರು, ಏನು ಕಥೆ? ಅಂಥವರಿಗೆ ಇಂಥ ಅನಾಚಾರದ ಅಳಿಯ ಸಿಕ್ಕಬೇಕೆ? ಶಾಸ್ತ್ರ, ಪುರಾಣ ಎಲ್ಲಾ ಓದಿದ್ದಾರೆ. ಹಾಳು ಇಂಗ್ಲಿಷ್ ಓದಿ, ಹೀಗಾಗಿದ್ದಾರೆ. ನಿಮ್ಮ ಸಹಾಯದಿಂದಲೇ ನಮ್ಮ ಯಜಮಾನರ ತಂಗೀಗೆ ಮದುವೆಯಾಗಬೇಕು. ಆಚಾರ ಉಳಿಯಬೇಕು.

**ಲಕ್ಷಮ್ಮ.**—(ವ್ಯಂಗ್ಯವಾಗಿ ನಕ್ಕು) ಅದೇಕೆ ಅವಳನ್ನ ನಾದಿನಿಯೆನ್ನದೆ "ನಮ್ಮ ಯಜಮಾನರ ತಂಗಿ" ಅಂತೀರಿ?

**ಅಕ್ಕಯ್ಯಮ್ಮ.**—ಅವಳನ್ನ ನಾದಿನಿಯೆನ್ನೋಕೆ ನನಗೆ ಮನಸ್ಸೇ ಬರೋದಿಲ್ಲ. ಅವಳ ಕಾಟ ಎಷ್ಟು ಅಂತೀರಿ?

**ಲಕ್ಷಮ್ಮ.**—ಸರಿ, ಒಬ್ಬೊಬ್ಬರಿಗೊಂದು ಪ್ರಾರಬ್ಧ, ದೇವರ ಲೀಲೆ ಎಂಥಾದ್ದೋ ಕಾಣೆ. ನಿಮ್ಮಂಥ ಒಳ್ಳೆಯವರಿಗೆ ನಾದಿನಿ ಕಾಟ. ನನಗೆ ಸುಂದರಿ ಕಾಟ. ಅವರಿಬ್ಬರಿಗೂ ಮದುವೆ ಹಿಡಿಸಿಬಿಟ್ಟರೆ ನಮ್ಮ ಕಾಟ ಸ್ವಲ್ಪ ಬಿಡುಗಡೆಯಾದೀತು. ನಮಗೆ ಸ್ವಲ್ಪ ಕೆಲಸ ಕಡಿಮೆಯಾಗಿ, ಮಾತುಕಥೆಗೆ ಇನ್ನಷ್ಟು ಬಿಡುವಾದೀತು. ನಮ್ಮ ಪುಣ್ಯ ಹೇಗಿದೆಯೋ ನೋಡೋಣ.

**ಕಾವೇರಮ್ಮ.**—(ವಿಶಾಲಾಕ್ಷಿಯೊಡನೆ ಪ್ರವೇಶಿಸಿ) ಹೀಗೆ ಮಾಡೋದು ನಿಮ್ಮಿಬ್ಬರಿಗೂ ಸರಿಯಲ್ಲ. ಅವರಿಬ್ಬರೂ ಇನ್ನೂ ಹುಡುಗಿಯರು. ವಯಸ್ಸಾದ ಮೇಲೆ ಅವರಿಗೂ ವೇಷ ಬರೋದು ಕಾದೇ ಇದೆ. ಈಗಲೇ ವಿರೂಪಮಾಡಿಸಿ ದುಃಖದಲ್ಲಿ ಮುಳುಗಿಸಬೇಡಿ. ದೇವರೇ ಅವರಿಗೆ ದುಃಖ ಕೊಟ್ಟಿದ್ದಾನೆ. ಅವರ ಮಡಿಲಿಗೆ ಕೆಂಡ ತುಂಬಿದ್ದಾನೆ. ನಿಮ್ಮ ಅನುಕೂಲಕ್ಕೋಸ್ಕರ ನೀವೂ ಅವರನ್ನ ಗೋಳಾಡಿಸಬೇಡಿ.

**ಲಕ್ಷಮ್ಮ.**—ನಿಮ್ಮ ಪುರಾಣ, ನಿಮ್ಮ ಉಪದೇಶ, ನಮಗೆ ಬೇಡ. ನೀವು ಹೊಂಚು ಕೇಳಿ ಅಂತ ನಾನು ಹೇಳಿರಲೂ ಇಲ್ಲ.

**ವಿಶಾಲಾಕ್ಷಿ.**—ಬೇಡ ಅಜ್ಜಿ. ನಾನು ಚಿಕ್ಕವಳು. ನನ್ನ ಮಾತು ಕೇಳಜ್ಜಿ. ನಿನ್ನ ತಲೆ ಹಾಗೆ ಸುಂದರಿ ತಲೆ ಆಗೋದು ಬೇಡ. ನಾನು ನೋಡಲಾರೆ, ಅಜ್ಜಿ. (ಅಳುವಳು. ಲಕ್ಷ್ಮಮ್ಮನು ದುರುಗುಟ್ಟಿ ನೋಡುವಳು.)

**ಕಾವೇರಮ್ಮ.**—ನಮ್ಮಮ್ಮಾ, ನಾನು ಹೊಂಚು ಕೇಳಲಿಲ್ಲ. ರಾತ್ರಿ ಹೊತ್ತು ಬೀದೀಲಿ ಮಾತನಾಡಿದರೆ ದೂರಕ್ಕೂ ಗಂಟೆಹೊಡೆದ ಹಾಗೆ ಕೇಳುತ್ತೆ.

**ಲಕ್ಷಮ್ಮ.**—ನಾವು ಮಾತನಾಡಿದ್ದು ನಿಮ್ಮ ಮನೆಗೂ ಕೇಳಿಸಿರ ಬೇಕು. ಅಲ್ಲವೆ? ಹೊಂಚು ಕೇಳಲಿಲ್ಲ. ಅಡಿಗೆ ಮನೆಗೇ ಮಾತು ಕೇಳಿಸಿತು.

**ಕಾವೇರಮ್ಮ.**—ಸುಂದರಿ ತಲೆಗೆ ಬೆಂಕಿ ಇಡಿಸೋ ಯೋಚನೆ ನೀವು ಮಾಡಿರುವುದು, ಅದರ ವಿಷಯದಲ್ಲಿ ನಿಮಗೂ ನಿಮ್ಮ ಅಳಿಯನಿಗೂ ಮಾತುಗಳು ನಡೆದಿರುವುದು, ಎಲ್ಲಾ ಆಯಾ ದಿನವೇ ನಿಮ್ಮಿಂದಲೇ ಯಾರ್ಯಾರಿಗೋ ತಿಳಿದಿದೆ. ಎಲ್ಲಿ ನೋಡಿದರೂ ನಿಮ್ಮ ಮನೆ ವಾಗ್ವಾದದ ಮಾತೇ. ವಿಶಾಲಿ ಜೊತೆ ಹುಡುಗಿಯರು ಕೂಡ "ಸುಂದರಿ ತಲೆ ಕೂದಲು ಹೋಗುತ್ತಂತೆ. ಅವಳ ಮುದ್ದು ಮುಖ ಆಮೇಲೆ ನೋಡೋದು ಹೇಗೇ ವಿಶಾಲಿ" ಅಂತ ಕೇಳಿದರಂತೆ. ತಿಳೀತೇ, ಅಮ್ಮ?

**ಲಕ್ಷಮ್ಮ.**—ಅದಿರಲಿ. ಈಗ ಹೊಂಚು ಕೇಳದೆ ಸವಾರಿ ಹೀಗೆ ಬಂದ ಬಗೆ?

**ಕಾವೇರಮ್ಮ.**—(ನೋವನ್ನು ತಾಳಲಾರದೆ ನಿಟ್ಟುಸಿರುಬಿಟ್ಟು ಕೈಕೊಡವುತ್ತ) ನಿಮ್ಮ ಹೊಂಚು, ನಿಮ್ಮ ಕುಹಕ ಯಾರಿಗೆ ಬೇಕಾಗಿದೆ! ನನ್ನ ಕೈಬೆರಳಿಗೆ ಚೇಳು ಕಚ್ಚಿದೆ. ಗುಂಡಾಭಟ್ಟರ ಮನೆಗೆ ಔಷಧ ಹಾಕಿಸಿಕೊಂಡು ಬರೋಣ ವೆಂತ ಹೊರಟೆ. ಕಿವಿ ಮುಚ್ಚಿಕೊಳ್ಳೋದಕ್ಕೆ ಕಿವಿಗೆ ರೆಪ್ಪೆಯಿಲ್ಲ; ಮುಚ್ಚಳವೂ ಇಲ್ಲ. ನಿಮ್ಮ ಮಾತು ಕೇಳಿ ಚೇಳು ಕಡಿದ ಯಾತನೆಯೂ ಮರೆಯುವಷ್ಟು ವ್ಯಥೆಯಾಯಿತು.

**ಲಕ್ಷಮ್ಮ.**—(ವ್ಯಂಗ್ಯವಾಗಿ) ಪಾಪ! ಔಷಧ ಹಾಕಿಸಿಕೊಳ್ಳಿ ಹೋಗಿ. ನಿಮಗೆ ಈ ಮಾತೆಲ್ಲಾ ಬೇಡ. ನೋವು ಇದರಿಂದ ಹೆಚ್ಚಾದೀತು ಹೋಗಿ.

**ಕಾವೇರಮ್ಮ.**—ದೇವರು ನಿಮ್ಮ ಮನಸ್ಸನ್ನು ಕಬ್ಬಿಣದಲ್ಲಿ ಮಾಡಿರ ಬೇಕು. ಮಡಿ ಹೆಂಗಸರು ಎಷ್ಟೆಷ್ಟು ಒಳ್ಳೆಯವರೋ ಇದ್ದಾರೆ. ನಿಮ್ಮ ಹಾಗಿರುವವರು ಅಪರೂಪ ಅಬ್ಬ! ಎಂಥ ಮನಸ್ಸು. ಬಾರೆ, ವಿಶಾಲಿ. (ಹೋಗುವರು.)

**ಲಕ್ಷಮ್ಮ.**—ಇವಳ ಸೆಡಾಕು ನಮ್ಮನ್ನೇನು ಮಾಡೀತು?.... ಅದಿರಲಿ....ಅಕ್ಕಯ್ಯಮ್ಮನವರೆ, ನೀವು ಇಲ್ಲಿಗೆ ಬಂದಾಗ ಏನೋ ಯೋಚನೆಮಾಡ್ತಾ ಮೆಲ್ಲಗೆ ಒರುತ್ತಿದ್ದಿರಿ. ಏನು, ನಾದಿನಿ ತಲೆ ಕೂದಲು ಮಾತೇ ತಾನೆ?

**ಅಕ್ಕಯ್ಯಮ್ಮ.**—ಅದೊಂದೇ ಅಲ್ಲಮ್ಮ. ಇವತ್ತು ತುಂಬಿದ ಮಂಗಳವಾರ. ನಮ್ಮ ಯಜಮಾನರು ಎಂಥ ಕೆಟ್ಟ ಮಾತನಾಡಿದರು ಅಂತೀರಿ? ಅವರ ತಂಗಿಗೆ ಮಡಿಮಾಡಿಸಬೇಕೆಂತ ನಾನು ಹೇಳಿದೆ.... ಅಯ್ಯೋ! ಎಂಥ ಮಾತನಾಡಿದರು, ಅಂತೀರಿ?

**ಲಕ್ಷಮ್ಮ.**—ಏನು, ಏನೆಂದರು?

**ಅಕ್ಕಯ್ಯಮ್ಮ.**—ಅವರು ಅಂದರು "ಲೇ, ನಿನ್ನ ಗೊಡ್ಡಾಚಾರಕ್ಕೂ ನನಗೂ ಬಲು ದೂರ. ನಾನು ಹೋದಮೇಲೆ ನೀನು ಹತ್ತನೇ ದಿನದವರೆಗೂ ಕಾಯದೆ....ಮೂರನೇ ದಿನವೋ ನಾಲ್ಕನೇ ದಿನವೋ ಬೇಕಾದರೂ.. ಕೂದಲು ತೆಗೆಸಿಕೊಂಡು ನುಣ್ಣಗೆ ತಲೆ ತೋಪಡ ಹೊಡೆಸಿಕೊ. ನಾನು ಬದುಕಿರುವವರೆಗೂ ನನ್ನ ತಂಗಿ ತಲೆ ಕೂದಲು ತೆಗೆಸುವ ಆಯಾಸ ನಿನಗೆ

ಬೇಡ'' ಎಂತ ಹೇಳಿದರು. ಎಂಥ ಅಮಂಗಳದ ಮಾತು. ನನ್ನ ದುಃಖ ನಿಮ್ಮ ಕೈಯಲ್ಲಾದರೂ ಹೇಳಿಕೊಳ್ಳೋಣ ಅಂತ ನಿಮ್ಮ ಮನೆಗೆ ಹೊರಟಿದ್ದೆ. ಬಲಗಣ್ಣು ಹುಬ್ಬು ರೆಪ್ಪೇ ಬೇರೆ ಹಾರ್ರಾತ್ತ ಇದೆ.

**ಲಕ್ಷಮ್ಮ.**—ಈ ಗಂಡಸರೇ ಹೀಗೆ. ದಯವಿಲ್ಲ, ದಾಕ್ಷಿಣ್ಯವಿಲ್ಲ. ಇನ್ನೊಬ್ಬರ ಸಂಕಟ ಅವರಿಗೆ ತಿಳಿಯೋದೇ ಇಲ್ಲ. ಬನ್ನಿ, ನಮ್ಮ ಮನೆ ಕಡೆಗೇ ಹೋಗೋಣ. ಕಾಳಿಕಾದೇವಿ ಗುಡಿ ಕುಂಕುಮದ ಪ್ರಸಾದ ಹಣೆಗೆ ಹಚ್ಚಿಕೊಂಡು ಆಮೇಲೆ ನಿಮ್ಮ ಮನೆಗೆ ಹೋಗುವಿರಂತೆ. ಅದರಿಂದ ಅನಿಷ್ಟ ಪರಿಹಾರ. ಒಳ್ಳೆಯದಾಗುತ್ತೆ. (ಇಬ್ಬರೂ ಹೋಗುವರು.)

(ತೆರೆಯು ಬೀಳುವುದು.)

---

## ದೃಶ್ಯ ೨

[ರಾಮರಾಯನ ಮನೆಯ ಹಜಾರ. ನೆಲಕ್ಕೆ ಉತ್ತಮವಾದ ಜಮಖಾನವನ್ನು ಹಾಸಿರುವುದು. ಅದರಮೇಲೆ ಅನೇಕ ಕುರ್ಚಿಗಳು, ಒಂದೆರಡು ಸೋಫಾಗಳು ಇರುವುವು. ಗೋಡೆಯ ಮೇಲೆ ಅನೇಕ ಪಟಗಳಿರುವುವು. ಅವುಗಳ ಮಧ್ಯದಲ್ಲಿ ಇಂದಿರೆಯ ದೊಡ್ಡ ತಸ್ವೀರು, ಅದಕ್ಕೆ ಬೆಂಡಿನ ಹೂಗಳ ಮಾಲೆಯೂ ಕೈರಾಟೆಯಿಂದ ತೆಗೆದ ಹತ್ತಿಯ ನೂಲಿನ ಮಾಲೆಯೂ ಹಾಕಿರುವುವು. ಒಂದು ಕಡೆಗೆ ದೊಡ್ಡದೊಂದು ಗಡಿಯಾರವು ಗೋಡೆಯ ಮೇಲಿರುವುದು. ಬೆಳಗಿನ ಎಂಟು ಗಂಟೆಯು ಹೊಡೆದು ಐದಾರು ನಿಮಿಷಗಳು ಕಳೆದಿರುವುವು. ಅಲ್ಲಿ ಸಣ್ಣ ಸಣ್ಣ ದುಂಡು ಮೇಜುಗಳ ಮೇಲೆ "ಕ್ರೋಷಾ" ಚೌಕಗಳೂ, ಇತರ ಚೌಕಗಳೂ ಹೊದ್ದಿಸಲ್ಪಟ್ಟು ಅವುಗಳ ಮೇಲೆ ಬಣ್ಣದ ವಿಗ್ರಹಗಳಿರುವುವು. ತೆರೆಯು ಮೇಲಕ್ಕೆ ಹೋಗುವ ವೇಳೆಗೆ ಸುಂದರಿಯು ತನ್ನ ತಾಯಿಯ ತಸ್ವೀರಿನ ಮುಂದೆ ಭಕ್ತಿಯಿಂದ ಕೈಮುಗಿದು ನಿಂತು "ವಂದೇ ಮಾತರಂ" ಎಂಬ ಗೀತೆಯನ್ನು ಹಾಡುತ್ತಿರುವಳು.]

**ರಾಮರಾಯ.**—(ಸುಂದರಿಯು ಹಾಡುತ್ತಿದ್ದ ಗೀತೆಯು ಮುಗಿಯುವ ವೇಳೆಗೆ ಪ್ರವೇಶಿಸಿ) ಮಗು, ಸುಂದರಿ, ಇದೇನಮ್ಮ, ಭಾರತಮಾತೆಯ ಮೇಲಿನ ಸ್ತೋತ್ರವನ್ನು ನಿಮ್ಮ ತಾಯಿಯ ತಸ್ವೀರಿನೆದುರಿಗೆ ಹೇಳಿ ಕೈಮುಗಿಯುತ್ತಿದ್ದೀಯೆ?

**ಸುಂದರಿ.**—(ಬೆಚ್ಚಿ ನಿಂತು ಕಣ್ದೆರೆದು) ತಪ್ಪಾಯಿತೇನಣ್ಣ?

**ರಾಮರಾಯ.**—ಏಕಮ್ಮ ಹೀಗೆ ಬೆಚ್ಚಿದೆ? ನಾನು ಪ್ರೀತಿಯಿಂದ ಮಾತನಾಡಿಸಿದರೆ ಬೆಚ್ಚಿದ್ದೇಕೆ ತಾಯಿ?

**ಸುಂದರಿ.**—(ಏನೋ ಹೇಳಲು ಹೊರಟು ಅನುಮಾನಿಸಿ) ಹೋಗಲಿ ಬಿಡಣ್ಣ. ಕತಚರ್ಯ ಯಾರಿಗೆ ಬೇಕಾಗಿದೆ?

**ರಾಮರಾಯ.**—ಏಕೆ ಬೆಚ್ಚಿದೆ, ಹೇಳಮ್ಮ.

**ಸುಂದರಿ.**—ಅಣ್ಣ, ಬೈಗುಳ ಕೇಳಿ ಕೇಳಿ, ಯಾವ ಕೆಲಸಮಾಡಿದರೆ ಏನು ತಪ್ಪೋ ಎಂತ, ಹಾಳು ಮೈ, ಹಾಳು ಮನಸ್ಸು ಬೆಚ್ಚುತ್ತವಣ್ಣ.

**ರಾಮರಾಯ.**—(ನಿಟ್ಟುಸಿರುಬಿಟ್ಟು, ಯಾರು ಎಲ್ಲಿ ನಿಂತಿರುವರೋ ಎಂದು ಕಳವಳದಿಂದ ಕೂಡಿ ನೇಪಥ್ಯದ ಕಡೆಗೆ ನೋಡಿ ಯಾರೂ ಇಲ್ಲವೆಂದು ಮನಸ್ಸಿಗೆ ಧೈರ್ಯಮಾಡಿಕೊಂಡು) ನಾನು ನಿನ್ನ ಬೈಯಲಿಲ್ಲಮ್ಮ. ಪ್ರೀತಿಯಿಂದ ಮಾತನಾಡಿದೆ. ದೇಶಕ್ಕೆ ಹೇಳುವ ಹಾಡು ತಾಯಿಗೆ ಹೇಳಿದೆಯಲ್ಲಾ ಅಂತ ಕೊಂಚ ವಿಚಿತ್ರವಾಗಿ ತೋರಿತು. ನಿನ್ನೆಯಿಂದ ಶಾಮಣ್ಣನ ಮನೆಗೆ ಕರೆದುಕೊಂಡು ಹೋಗಿದ್ದಾರಲ್ಲ. ಅಲ್ಲಿದ್ದೂ ಇಲ್ಲಿಗೆ ಬಂದು ದೇಶಕ್ಕೆ ಹೇಳುವ ಹಾಡು ತಾಯಿಗೆ ಹೇಳಿದೆಯಲ್ಲಾ ಅಂತ ಕೊಂಚ ವಿಚಿತ್ರವಾಗಿ ತೋರಿತು.

**ಸುಂದರಿ.**—ನನ್ನ ತಾಯಿಯೂ ಅವಳೆ, ಭಾರತಮಾತೆಯೂ ಅವಳೆ, ನನ್ನ ದೇವರೂ ಅವಳೆ, ನನ್ನ ಸಮಸ್ತವೂ ಅವಳೆ. ಅನಾಥೆಯಾದ ನನಗೆ ಅವಳೊಬ್ಬಳೇ (ಗದ್ಗದ ಸ್ವರದಿಂದ) ಗತಿಯಣ್ಣ. ಅಮ್ಮನ ತಸ್ವೀರಿಗೆ ಕೈಮುಗಿಯದೆ ಒಂದು ದಿನವೂ ನಾನಿರಲಾರೆನಣ್ಣ. ನನಗೆ ಭಾರತಮಾತೆಯೇ ತಾಯಿ, ತಾಯಿಯೇ ಭಾರತಮಾತೆ. ಅವರಿಬ್ಬರಿಗೂ ಭೇದವಿಲ್ಲ.

**ರಾಮರಾಯ.**—ಅವಳ ಹಾಗೆ ನೀನೂ ಬಹಳ ಹೆಂಗರುಳಿನವಳಮ್ಮ. (ನಿಟ್ಟುಸಿರುಬಿಟ್ಟು) ನಮ್ಮನ್ನ ಬಿಟ್ಟು ಸತ್ತುಹೋದಳು.

**ಸುಂದರಿ.**—ನನ್ನ ಭಾಗಕ್ಕೆ ಅಮ್ಮ ಹೋಗಿಲ್ಲಣ್ಣ. ಏಕೆ ಅಂತೀಯೆ? ಅಮ್ಮ ಬದುಕುವುದಿಲ್ಲವೆಂತ ತಿಳಿದಮೇಲೆ ಅವಳು ನನ್ನ ಕತ್ತು ತಬ್ಬಿಕೊಂಡು ಅತ್ತು "ನಿನ್ನದೊಂದೇ ನನಗೆ ಯೋಚನೆ ಪುಟ್ಟ. ದೇವರು ನಿನ್ನ ಸಂಸಾರ ಮುಳಗಿಸಿದ್ದೇ ನನ್ನ ಕರುಳು ಕುಯ್ದಾ ಇತ್ತು. ಈಗ ನಾನೂ

ಕಣ್ಣು ಮುಚ್ಚಿಕೊಳ್ತೀನಿ. ತಾಯಿ, ನನ್ನ ಮಾತು ಕೇಳು. ನಾನು ಸತ್ತರೂ ನನ್ನ ಜೀವ ಮಾತ್ರ ನಿನ್ನ ಯೋಗಕ್ಷೇಮ ನೋಡಿಕೊಳ್ಳೋದಕ್ಕೆ ಸದಾ ನಿನ್ನ ಸುತ್ತ ಇರುತ್ತಮ್ಮ" ಅಂತ ಹೇಳಿದ್ದಳಣ್ಣ.

**ರಾಮರಾಯ.**—ಅಯ್ಯೋ! (ನಿಟ್ಟುಸಿರು ಬಿಟ್ಟು) ಇನ್ನು ಅವಳ ಮಾತೇಕಮ್ಮ? ಅದೆಲ್ಲಾ ಹಳೇ ಕತೆಯಾಯಿತು.

**ಸುಂದರಿ.**—ನನಗೇನೊ ಈ ಪಟದೆದುರಿಗೆ ನಿಂತರೆ ಅವಳು ಎದುರಿಗಿದ್ದ ಹಾಗೇ ಭಾವನೆ. ನನ್ನ ದುಃಖ ಇದಕ್ಕೆ ವರದಿ ಹೇಳಿ ಅತ್ತುಬಿಟ್ಟರೆ ಅಮ್ಮನಿಗೆ ಹೇಳಿ ಅವಳು ಸಮಾಧಾನ ಮಾಡಿದ ಹಾಗೆಯೇ ಮನಸ್ಸಿಗೆ ತೃಪ್ತಿ. ಮನಸ್ಸಿಗೆ ತಡೆಯಲಾರದಷ್ಟು ಹಿಂಸೆಯಾದರೆ ನನಗೆ ಕೋಪ ಬರುತ್ತಣ್ಣ. ನಾನು ಕೋಪಿಸಿಕೊಂಡು ಯಾರಲ್ಲಾದರೂ ದುಡುಕಿ ಮಾತನಾಡಿದರೂ, ಆದಕ್ಕೂ ಸಂಕಟಪಟ್ಟು ಅಮ್ಮನೆದುರಿಗೆ ತಪ್ಪು ಒಪ್ಪಿಕೊಳ್ಳುತ್ತೇನಣ್ಣ. ಆಗ ಅಮ್ಮ ಬುದ್ಧಿ ಹೇಳ್ತಾಳಣ್ಣ. ಅಮ್ಮ ನನ್ನ ಹತ್ತಿರ ನಿಂತು ಬೆನ್ನು ಸವರಿ ಮಾತನಾಡಿದ ಹಾಗೇ ಆಗುತ್ತಣ್ಣ.

**ರಾಮರಾಯ.**—ನಿನ್ನ ಸ್ವಭಾವವೇ ಒಂದು ವಿಚಿತ್ರವಮ್ಮ. ಏನೇನೋ ಇಲ್ಲದ್ದನ್ನೆಲ್ಲ ಊಹಿಸಿಕೊಳ್ಳುತ್ತೀಯೆ.

**ಸುಂದರಿ.**—ಅಣ್ಣ!....ಅಣ್ಣ!....ಅಣ್ಣ!

**ರಾಮರಾಯ.**—ಏನಮ್ಮ?

**ಸುಂದರಿ.**—ಅಣ್ಣ, ನೀನು ಮಾಡಿರುವ ತೀರ್ಮಾನ ಬದಲಾಯಿಸುವುದು ತೀರ ಅಸಾಧ್ಯವೇನಣ್ಣ? ನನ್ನ ಕೂದಲು ಕಂಡರೆ ಅಮ್ಮನಿಗೆ ಎಷ್ಟು ಪ್ರೀತಿಯೋ ನೋಡು. ನಾನು ಹೀಗಾದಮೇಲೆ ಅದನ್ನ ನೋಡಿ ಅಳೋಳು. ಅದಕ್ಕೆ ಮುಂಚೆ—ನನಗೆ ಅರಿಸಿನ ಕುಂಕುಮವಿದ್ದಾಗ—ನನ್ನ ಜಡೆ ನೋಡಿ ನೋಡಿ ಹಿಗ್ಗೋಳು. ಅವಳ ಮೇಲಿನ ಪ್ರೀತಿಗಾದರೂ ನನ್ನ ಕೂದಲು ಇನ್ನು ಕೆಲವು ವರುಷ ಉಳಿಸಿರಣ್ಣ. ನಾನೇ ಇದನ್ನ ಹೇಳಿಕೊಳ್ಳಬೇಕಾಗಿ ಬಂದಿದೆ. ಹೇಳುವುದಕ್ಕೂ ಸಂಕೋಚ.

**ರಾಮರಾಯ.**—ಶಾಸ್ತ್ರವಮ್ಮ. ಶಾಸ್ತ್ರಕ್ಕೆ ಪ್ರೀತಿ ಎದುರೇ ಹೇಳು. ಮೀರುವ ಹಾಗಿಲ್ಲ. ಸ್ವಾಮಿಗಳು ಬೇರೆ ಬರ್ತಾರೆ.

**ಸುಂದರಿ.**—(ನಿಟ್ಟುಸಿರುಬಿಟ್ಟು) ಸ್ವಾಮಿಗಳು ಬಂದರೆ ಬರಲಿ. ಭಕ್ತಿ ತೋರಿಸೋಣ. ನನ್ನ ತಲೆಗೆ ಬೆಂಕಿ....ಏಕೆ....ಇಡಬೇಕಣ್ಣ? ಅಣ್ಣ, "ಸಕೇಶಿ, ಸಕೇಶಿ" ಅನ್ನಿಸಿಕೊಂಡು ಸಾಕಾಗಿದೆ. ಮನೆಯಲ್ಲಿ ಮಾಡಿದ ತಿಂಡಿಯೊಂದೂ ಸಕೇಶಿಗೆ ಕೊಡಬಾರದಂತೆ. ಬೇಡ. ತಿಂಡಿಕೊಟ್ಟರೆ ದೇಹ ಕೊಬ್ಬಿ ಹೋಗುತ್ತಂತೆ. ಸಕೇಶಿ ಒಳ್ಳೇ ಸೀರೆ ಉಡಕೂಡದಂತೆ. ಬೇಡ. ಒಡವೆಯಂತೂ ಇಟ್ಟುಕೊಳ್ಳಲೇ ಕೂಡದಂತೆ. ಬೇಡ. ಸಕೇಶಿ ದೇಹವನ್ನು ಶೋಷಿಸಬೇಕಂತೆ. ಆಗಲಿ. ಇದೆಲ್ಲದರಲ್ಲೂ ಅಜ್ಜಿ ಹೇಳಿದ ಹಾಗೆ ಕೇಳ್ತೀನಿ. ಹಾಗೆಯೇ ನಡೀತಿದೆ. ನಾನು ಇದೆಲ್ಲಾ ಖಂಡಿತ ನಡಿಸಿಕೊಂಡು ಬರ್ತೀನಣ್ಣ. ಆದರೆ, ಆದರೆ, ಇನ್ನು ಕೆಲವು ವರುಷ ಹೀಗೇ ಇರ್ತೀನಣ್ಣ. ಹೆಂಗಸು ಹೆಂಗಸಿನಂತಿರದೆ ಹೀಗೆಲ್ಲಾ ಮಾತನಾಡಬೇಕಾಗಿದೆ.

**ರಾಮರಾಯ.**—(ನಿಟ್ಟುಸಿರುಬಿಟ್ಟು) ನಿನಗೆ ತಿಂಡಿಯೇ ಕೊಡುವುದಿಲ್ಲ ವೇನಮ್ಮ? ಅಯ್ಯೋ, ರಾಮ!

**ಸುಂದರಿ.**—ಅದು ಅಜ್ಜಿ ತಪ್ಪಲ್ಲ. ಅಜ್ಜಿ ನಂಬಿಕೆ ಹಾಗಿರಬಹುದು. ಅದೆಲ್ಲಾ ಹೋಗಲಿ. ನನ್ನ ಮಾತಿಗೆ ಉತ್ತರ ಹೇಳಣ್ಣ.

**ರಾಮರಾಯ.**—ಶಾಸ್ತ್ರಕ್ಕೆ ಕರುಣವಿಲ್ಲವಮ್ಮ.

**ಸುಂದರಿ.**—ಇದುವರೆಗೆ ನಾನು ಹೀಗಿದ್ದದ್ದಕ್ಕೇ ನನಗೆ ನರಕವಾಗ ಬೇಕಲ್ಲ. ಇನ್ನು ಸ್ವಲ್ಪ ದಿನವೂ ಹೀಗೇ ಇದ್ದು ಆ ಸ್ವಲ್ಪ ದಿನಕ್ಕೂ ಅದೇ ನರಕ ಅನುಭವಿಸಿದರಾಯಿತು. "ಸುಂದರಾ! ನಿನ್ನ ಜಡೆಯಷ್ಟು ಸೊಗಸೆ!" ಅಂತ ಅವರು ಬದುಕಿದ್ದಾಗ ಹೇಳುತ್ತಿದ್ದರಣ್ಣ. ನಾಚಿಕೆಯೂ ಬಿಟ್ಟು ಹೇಳಿದೆನಣ್ಣ. (ಅಳುವಳು.)

(ನೇಪಥ್ಯದಿಂದ "ರಾಮರಾಯರೇ, ರಾಮರಾಯರೇ" ಎಂದು ಕೂಗು ಕೇಳಿಸು ವುದು. ಸುಂದರಿಯು ವ್ಯಥೆಯಿಂದ ತಲೆ ತಗ್ಗಿಸಿಕೊಂಡು ಹೊರಟುಹೋಗುವಳು.)

**ರಾಮರಾಯ.**—ದಯ ಮಾಡಿಸಿ ಹನುಮಂತಸೆಟ್ಟರೇ, ದಯ ಮಾಡಿಸಿ.

**ಹನುಮಂತಸೆಟ್ಟಿ.**—(ಶಾಮಣ್ಣನೊಡನೆ ಪ್ರವೇಶಿಸಿ) ರಾಯರಿಗೆ ನಮಸ್ಕಾರ. ಇವರನ್ನೂ ಕರೆದುಕೊಂಡು ದರ್ಶನಕ್ಕಾಗಿ ಬಂದೆ.

**ರಾಮರಾಯ.**—ನಮಸ್ಕಾರ, ಸೆಟ್ಟರೇ. ಕೂಡಿ. ಕೂತುಕೊ, ಶಾಮಣ್ಣ. (ಇಬ್ಬರೂ ಕುಳಿತುಕೊಳ್ಳುವರು.)

**ಹನುಮಂತಸೆಟ್ಟಿ.**—ನಾನು ಈ ದಿನ ಒಂದು ಕಡೆಗೆ ಪ್ರಯಾಣ ಹೊರಡಬೇಕಾಗಿದೆ. ಸಿಧಾನವಾಗಿ ಮಾತನಾಡೋದಕ್ಕೆ ಹೊತ್ತಿಲ್ಲ. ನನಗೆ ಹಣ ಅಗತ್ಯವಾಗಿ ಬೇಕಾಗಿದೆ. ಪೂರ್ವಾದಿ ಆಧಾರವಿದ್ದೂ ನಾನು ಹಿಂದು ಮುಂದು ನೋಡದೆ ಹಣ ಕೊಟ್ಟೆ. ಅಲ್ಲದೆ ಶಾಮಣ್ಣನವರೂ ಜಂಟಿಯಾಗಿ ತಮ್ಮ ಆಸ್ತಿಯನ್ನೂ ಸೇರಿಸಿ ಆಧಾರಮಾಡಿ ಕೊಟ್ಟಿದ್ದಾರೆ. ಅದರ ಧೈರ್ಯದ ಮೇಲೆ ಕೊಟ್ಟೆ.

**ರಾಮರಾಯ.**—(ನಗುತ್ತ) ಎರಡೂ ನೀವೇ ಹೇಳ್ತೀರಿ.

**ಹನುಮಂತಸೆಟ್ಟಿ.**—ಅಲ್ಲ, ಮಾತಿಗೆ ಹೇಳಿದೆ ಸ್ವಾಮಿ. ಅಥವಾ ಇದ್ದದ್ದು ಇದ್ದಹಾಗೇ ಹೇಳಿಯೇ ಬಿಡ್ತೀನಿ. ನೀವು ಅವರನ್ನೂ ಸೇರಿಸಿ ಜಂಟಿಯಾಗಿ ಬರೆದು ಕೊಡದೆ ಹೋಗಿದ್ದರೆ, ನಾನು ಹಣ ಕೊಡ್ತಿರಲಿಲ್ಲ. ಭಾರಿ ಮೊಬಲಗು ನೋಡಿ.

**ರಾಮರಾಯ.**—(ಕುಳಿತುಕೊಂಡು) ನಿಮ್ಮ ಹಣಕ್ಕೆ ಭದ್ರಮಾಡಿ ಕೊಂಡಿದ್ದೀರಲ್ಲ.

**ಹನುಮಂತಸೆಟ್ಟಿ.**—ಅದರ ಮಾತಲ್ಲ ನಾನು ಹೇಳಿದ್ದು. ಬಡ್ಡಿ ಬೆಳೆದುಹೋಗಿದೆ. ತಾವು ಬಡ್ಡಿ ಕೊಡಲೇ ಇಲ್ಲ. ನನಗೆ ಹಣ ಅಗತ್ಯ ವಾಗಿ ಬೇಕಾಗಿದೆ. ನೀವಿಬ್ಬರೂ ಸೇರಿ ಅಸಲು ಬಡ್ಡಿ ಮೊತ್ತಕ್ಕೆ ಒಟ್ಟಿಗೆ ಬೇರೆ ಪತ್ರ ಬರೆದುಕೊಟ್ಟರೂ ಆಗಬಹುದಾಗಿತ್ತು. ಆದರೆ ಹಣ ಬೇಕಾಗಿದೆ. ಕೊಟ್ಟುಬಿಡಿ.

**ರಾಮರಾಯ.**—ನಾವಿಬ್ಬರೂ ಯೋಚನೆಮಾಡಿ ಹೇಳ್ತೇವೆ. ತಾವು ಊರಿಗೆ ಬಂದ ಕೂಡಲೇ ತಿಳಿಸ್ತೇವೆ.

**ಹನುಮಂತಸೆಟ್ಟಿ.**—ಹಾಗೆ ಮಾಡಿ. (ಮೇಲಕ್ಕೆದ್ದು) ನಾನು ಕೇಳಿದ್ದಕ್ಕೆ ಕೋಪಿಸಿಕೊಳ್ಳಬೇಡಿ, ನಮಸ್ಕಾರ. (ರಾಮರಾಯನೂ ಎದ್ದು ನಮಸ್ಕರಿಸುವನು. ಸೆಟ್ಟಿಯು ಹೋಗುವನು.)

**ನೀಲಕಂಠಭಟ್ಟ.**—(ಪ್ರವೇಶಿಸಿ) ಬರಬಹುದೆ, ರಾಯರೆ?

**ಶಾಮಣ್ಣ.**—(ನಗುತ್ತ) ಬಂದೇ ಇದ್ದೀರಿ, ಭಟ್ಟರೆ! "ಬರಬಹುದೆ" ಅಂತ ಕೇಳುವುದೇಕೆ?

**ನೀಲಕಂಠಭಟ್ಟ.**—(ಸ್ವಗತ) ಎಷ್ಟು ಸೊಕ್ಕು ಇವನಿಗೆ? ಇರಲಿ (ಪ್ರಕಾಶ) ನಾನು ಶುದ್ಧ ವೈದಿಕಗೊಡ್ಡು. ಕೆಲವರು ನಿಮ್ಮಂಥವರು ನನ್ನ ಮಾತು ಕೇಳಿದರೆ ಕುಹಕಮಾಡಲೇ ಬೇಕಾಗುತ್ತೆ. ಮಾಡಿಯೂ ಮಾಡ್ತೀರಿ.

**ರಾಮರಾಯ.**—ದಯಮಾಡಿ, ನೀಲಕಂಠಭಟ್ಟರೆ. ಕೂಡಿ. (ಭಟ್ಟನು ಕುಳಿತಮೇಲೆ ತಾನೂ ಕೂಡುವನು.)

**ನೀಲಕಂಠಭಟ್ಟ.**—ನಾನು ಬಹಳ ಮುಂಚೆ ಬಂದೆನೆಂತಾ ಕಾಣುತ್ತೆ.

**ರಾಮರಾಯ.**—ಏನೂ ಇಲ್ಲ. . . . ತಾವು ದಯಮಾಡಿಸುವುದೇ ಅಪರೂಪ.

**ನೀಲಕಂಠಭಟ್ಟ.**—ಸ್ವಾಮಿಗಳು ಬರುವ ದಿನ ತೀರ ಸಮೀಪ ವಾಯಿತು. ತಮ್ಮ ಮಗಳಿಗೆ ಮುಡಿ ಹಿಡಿಸುವುದಕ್ಕೆ ನಾಡಿದ್ದು ಪ್ರಯತ್ನ ನಡೆಯುತ್ತೆ ತಾನೆ? ನಾನು ಅದನ್ನು ನಾಡಿದ್ದಿಗೆ ಗೊತ್ತುಮಾಡಿಕೊಟ್ಟು ಬಹಳ ದಿನಗಳಾದವು. ಮತ್ತೆ ಜ್ಞಾಪಕ ಕೊಡೋಣವೆಂತ ಬಂದೆ.

**ರಾಮರಾಯ.**—ಪುರೋಹಿತರಾದ ತಾವು ಹೇಳಿದ್ದಕ್ಕೆ ಎದುರುಂಟೆ? ಶಾಸ್ತ್ರವೆಂದಮೇಲೆ ಶಾಸ್ತ್ರ. ಆದರೂ ಮನಸ್ಸಿಗೆ ವ್ಯಥೆ.

**ನೀಲಕಂಠಭಟ್ಟ.**—ವ್ಯಥೆ ಗಿಥೆ ಹಚ್ಚಿಕೊಳ್ಳಬಾರದು. ಈ ಸಂಸಾರ ದಲ್ಲಿ ನೀರಿನ ಮಧ್ಯದ ತಾವರೇ ಎಲೆಯಂತೆ ನಿರ್ಲಿಪ್ತರಾಗಿರಬೇಕು. ಅದೇ ಮಹಾತ್ಮರ ಲಕ್ಷಣ.

**ಶಾಮಣ್ಣ.**—ನಿಜ. . . . ಆದರೆ ಸಾಧ್ಯವಾಗಬೇಕಲ್ಲ?

**ನೀಲಕಂಠಭಟ್ಟ.**—ಸಾಧ್ಯವಾಗಬೇಕು. ಸಾಧ್ಯವಾಗದಿದ್ದರೆ ಹೇಗೆ?

**ಶಾಮಣ್ಣ.**—ಅದು ಕಷ್ಟ, ಸ್ವಾಮಿ. ಭಟ್ಟರೆ, ಸುಂದರಿಗೆ ಇನ್ನೂ ಚಿಕ್ಕ ವಯಸ್ಸು.

**ನೀಲಕಂಠಭಟ್ಟ.**—ಗಂಡ ಹೋದಮೇಲೆ ವಯಸ್ಸು ಕಟ್ಟಿಕೊಂಡೇ ನಂತೆ?

**ಶಾಮಣ್ಣ.**—ಹಾಗಲ್ಲ. ಅವಳಲ್ಲಿ ದಯೆ ತೋರಿಸಿ. . . . ಇದನ್ನು ತಪ್ಪಿಸಿ, ಸ್ವಾಮಿ.

**ಸುಂದರಿ.**—(ಪ್ರವೇಶಿಸಿ) ನೀಲಕಂಠಭಟ್ಟರೆ, ಗಂಡಸರು ಮಾತ ನಾಡುತ್ತಿರುವಾಗ ಬಾಯಿಹಾಕಿದೆ. ಕ್ಷಮಿಸಿ. . . . ಗಟ್ಟಿಗಿತ್ತಿಯೆನ್ನ ಬೇಡಿ. ಇನ್ನು ಕೆಲವು ವರುಷ ಕಳೆಯಲಿ. ಕೈಮುಗಿದು ಬೇಡಿಕೊಳ್ಳೀನಿ. ನನ್ನ ಮಾತು ಕೇಳಿ ದಯೆ ತೋರಿಸಿ. ನಿರ್ವಾಹವಿಲ್ಲದೆ ಮಾತನಾಡಿದೆ; ಎಲ್ಲರೂ ಕ್ಷಮಿಸಿ.

**ನೀಲಕಂಠಭಟ್ಟ.**—ಶಾಸ್ತ್ರವಮ್ಮಾ ಶಾಸ್ತ್ರ. ಸ್ವಾಮಿಗಳು ಬರುತ್ತಾರೆ.

**ರಾಮರಾಯ.**—ಸುಂದರಿ! ಕೂತುಕೊಳ್ಳಮ್ಮ.

**ಸುಂದರಿ.**—ಇರಲಿ ಅಣ್ಣಾ. (ನಿಂತೇ ಇರುವಳು.)

**ಶಾಮಣ್ಣ.**—ನೀಲಕಂಠಭಟ್ಟರೆ! ನಾಗಾಜೋಯಿಸರ ತಂಗಿ ನಮ್ಮ ಸುಂದರಿಗಿಂತ ದೊಡ್ಡವಳು.

**ನೀಲಕಂಠಭಟ್ಟ.**—(ರೇಗಿಬಿದ್ದು ದೊಡ್ಡ ಧ್ವನಿಯಲ್ಲಿ) ಆ ವ್ರಾತ್ಯ ನಾಗಾಜೋಯಿಸನ ಹಾಗೆ ನಾನು ಅಶಾಸ್ತ್ರೀಯವಾದದ್ದನ್ನ ಹೇಳಿ ನನ್ನ ಗೃಹಸ್ಥರನ್ನೂ ಅವರ ಪಿತೃಗಳನ್ನೂ ನರಕಕ್ಕೆ ಕಳುಹಿಸಲೇ? ನಕೇಶಿಗೆ ದೈವಕೃಪೆಯಿಲ್ಲ. ಅವಳು ಮಾಡಿದ ಅಡಿಗೆ ದೇವರ ನೈವೇದ್ಯಕ್ಕೂ ನೇಮದ ಊಟಕ್ಕೂ ಆಗುವಹಾಗಿಲ್ಲ. ನಕೇಶಿಯು ದಾನ ಕೊಡುವುದ ಕ್ಕಾಗಲಿ, ಶುಭಕಾರ್ಯಗಳಲ್ಲಿ ಭಾಗಿಯಾಗುವುದಕ್ಕಾಗಲಿ ಅರ್ಹಳಲ್ಲ. ಅವಳಿಂದ ದಾನ ಪಡೆಯುವುದು ಕೂಡ ಮಹಾಪಾಪ. ಆ ನಾಗಾ ಜೋಯಿಸನಿಂದ ಈ ಊರಿನ ಬ್ರಾಹ್ಮಣ್ಯವೇ ಹಾಳಾಯಿತು. (ಉಚ್ಚ ಸ್ವರದಲ್ಲಿ) ಆ ವ್ರಾತ್ಯ ನಾಗಾಜೋಯಿಸನ ಹಾಗೆ ನಾನೂ ಕುಣಿಯಲೆ? ಅಶಾಸ್ತ್ರೀಯವಾದುದನ್ನು ಹೇಳಿ, ರಾಮರಾಯರ ಪಿತೃಗಳನ್ನೂ ಅವರ ಅಳಿಯನನ್ನೂ ಸ್ವರ್ಗದಿಂದ ತಳ್ಳಿಸಲೆ?

**ನಾಗಾಜೋಯಿಸ.**—(ಪ್ರವೇಶಿಸಿ) ಏನು ಸ್ವಾಮಿ, ನನ್ನ ಬೈತಾ ಇದ್ದೀರಿ? ಸ್ವರ್ಗದ ಏರ್ಪಾಡಿಗೂ ನರಕದ ಏರ್ಪಾಡಿಗೂ ನೀವೇ ಯಜಮಾನರು, ಅಲ್ಲವೆ? ನೀವು ಸ್ವರ್ಗದಿಂದ ರಾಮರಾಯರ ಪಿತೃಗಳನ್ನು ನೋಡಿಕೊಂಡು ಬಂದು ಎಷ್ಟು ದಿವಸವಾಯಿತು?

(ಎಲ್ಲರೂ ಅಪ್ರತಿಭರಾಗುವರು.)

**ನೀಲಕಂಠಭಟ್ಟ.**—ಸಂಭಾಷಣೆಗೇ ಅಯೋಗ್ಯರಾಗಿಯೂ, ಹೊಂಚು ಕೇಳಿಕೊಂಡು ಕರೆಯದ ಸ್ಥಳಕ್ಕೆ ಬರುವಂಥವರಾಗಿಯೂ ಇರುವವರೊಡನೆ ನಮಗೆ ಮಾತು ಬೇಡ.

**ರಾಮರಾಯ.**—ಕೂಡಿ, ಜೋಯಿಸರೆ. (ಜೋಯಿಸನು ನಿಂತೇ ಇರುವನು.)

**ನಾಗಾಜೋಯಿಸ.**—ಅಬ್ಬ! ಅಪರಾಧಮಾಡಿಯೂ ಎದೆಗಾರಿಕೆ! ನಾನು ಹೊಂಚೇಕೆ ಕೇಳಬೇಕು? ನಗಾರಿ ಹೊಡೆದಹಾಗೆ ಆರ್ಭಟಿಸುವ ಶಬ್ದ ಎಷ್ಟು ದೂರಕ್ಕೆ ಬೇಕಾದರೂ ಕೇಳುತ್ತೆ. ಬೀದಿ ಪಕ್ಕದ ಕಿಟಕಿ ಬಾಗಿಲುಗಳೆಲ್ಲಾ ತೆಗೆದುಕೊಂಡು ಅರಚಿದರೆ ಬೀದಿಯಲ್ಲಿ ಹೋಗುವವರೆಲ್ಲಾ ಕಿವಿ ಮುಚ್ಚಿಕೊಂಡು ಹೋಗಬೇಕೇನು? ನನ್ನನ್ನೇ ಬೈಗುಳದ ಮಡುವಿನಲ್ಲಿ ಮುಳುಗಿಸುತ್ತಿರುವಾಗ ನಾನು ಕರೆಸಿಕೊಂಡು ಬರಬೇಕೇನು?

**ರಾಮರಾಯ.**—(ಸಂಕೋಚದಿಂದಲೂ, ತಾನು ಉಪಚಾರ ಹೇಳದಿದ್ದರೆ ನಿರ್ವಾಹವಿಲ್ಲವೆಂಬ ಭಾವನೆಯಿಂದಲೂ) ಕೂಡಿ, ಜೋಯಿಸರೆ, ಕೂಡಿ.

**ನಾಗಾಜೋಯಿಸ.**—ಇರಲಿ, ದೇವರು; ನನಗೇಕೆ ಉಪಚಾರ? ನೀಲಕಂಠಭಟ್ಟರೆ! ನಿಮ್ಮಂಥ ವೈದಿಕರು ವೇದಗಳ ಗಂಧವೂ ಇಲ್ಲದೆ, ಸಹಗಮನವೂ ಶಾಸ್ತ್ರ ಸಮ್ಮತವೆಂದೇ ಕುಣಿಯುತ್ತಾ ಇದ್ದರು. ಮಾಡ ಬಾರದ ಕೆಲಸಮಾಡಿ ಸ್ತ್ರೀಮೇಧ ಯಜ್ಞಮಾಡುತ್ತಾ ಇದ್ದರು. ಕುಂಪಣಿ ಸರ್ಕಾರದವರು ನಿಲ್ಲಿಸಿದಮೇಲೆ ತೆಪ್ಪಗಾದರು. ಸಹಗಮನ ತಪ್ಪಿದಮೇಲೆ ಬ್ರಾಹ್ಮಣಿಕೆ ನಿಮಗೆಲ್ಲಾ ಉಳಿದಿದೆಯೋ? "ವಿಧವೆಯರಿಗೆ ಕೂದಲು ತೆಗೆಸಿದರೆ ಆರು ತಿಂಗಳು ಸಜಾ" ಅಂತ ಕಾನೂನು ಬರಲಿ. ಆಗ ಅದಕ್ಕೂ

ಒಪ್ಪಿ ಹಲ್ಲು ಕಿರಿಯುತ್ತೀರಿ. ನೀವಾಗಿಯೇ ಕರುಣಾ ತೋರಿಸಿ ಅಂದರೆ ಬಿರುಸಾಗುತ್ತೀರಿ. ನಿಮಗೆ ನಮ್ಮೆಲ್ಲರಿಗಿಂತ ವಯಸ್ಸಾಗಿದ್ದೂ ನಿಷ್ಫಲ.

**ನೀಲಕಂಠಭಟ್ಟ.**—ನಿಮ್ಮಂಥ ವ್ರಾತ್ಯರಿಂದ ಬ್ರಾಹ್ಮಣ್ಯ ಮುಳುಗಿ ಹೋಗ್ತಾ ಇದೆಯಲ್ಲಾ ಅಂತ ನನಗೆ ಸಂಕಟ.

**ನಾಗಾಜೋಯಿಸ.**—ವೇದಶಾಸ್ತ್ರಗಳ ನಿಜವಾದ ಅರ್ಥವೇ ತಿಳಿಯದೆ ಸಂಸ್ಕೃತದಲ್ಲಿ ಹೇಳಿರೋದೆಲ್ಲಾ ಶಾಸ್ತ್ರ ಪ್ರಮಾಣವೆಂತ ಭಾವಿಸುವ ನಿಮ್ಮಂಥವರಿಂದ ಬ್ರಾಹ್ಮಣ್ಯದ ತೂಕ ಕಡಿಮೆಯಾಯಿತೇ ಅಂತ ನನಗೆ ಸಂಕಟ.

**ನೀಲಕಂಠಭಟ್ಟ.**—ಸಾಕಯ್ಯ ನಿನ್ನ ಹರಟೆ! ನಾನು ಅಶಾಸ್ತ್ರೀಯವಾದುದನ್ನು ಮಾಡಿಸಲಾರೆ.

**ನಾಗಾಜೋಯಿಸ.**—ಶಾಸ್ತ್ರ ವಚನಗಳನ್ನು ಹಾಗಾದರೆ ಎಲ್ಲಕ್ಕೂ ಅನ್ವಯಿಸಿ.

**ರಾಮರಾಯ.**—ಇನ್ನು ಚರ್ಚೆಗಳೊಂದೂ ಬೇಡ. ನಮ್ಮ ಪುರೋಹಿತರು ಹೇಳಿದ್ದು ನನಗೆ ಪ್ರಮಾಣ. ನೀವು ನಮ್ಮ ಪುರೋಹಿತರಾಗಿದ್ದರೆ ನೀವು ಹೇಳಿದಹಾಗೆ ಕೇಳುತ್ತಿದ್ದೆ. ನಿಮ್ಮ ತಂಗಿ ಮಾತು ನಿಮಗೆ. ನಮ್ಮ ಹುಡುಗಿ ಮಾತು ನನಗೆ.

**ನೀಲಕಂಠಭಟ್ಟ.**—ನಮ್ಮ ರಾಯರು ಆಸ್ತಿಕರತ್ನ. (ಸುಪ್ರೀತನಾಗಿ ನಕ್ಕು) ಆಸ್ತಿಕ ರತ್ನ.

**ಸುಂದರಿ.**—(ವ್ಯಸನದಿಂದ) ಕೊನೆಗೂ ಇದೇ ನಿರ್ಧಾರವೆ? ನಾನು ಆ ಹಾಳು ನಾಡಿದ್ದು ಬರುವುದಕ್ಕೆ ಮುಂಚೆಯೇ ಪ್ರಾಣ ಕಳೆದುಕೊಂಡರೆ ನೀವೆಲ್ಲ ಏನುಮಾಡುತ್ತೀರಿ?

**ನೀಲಕಂಠಭಟ್ಟ.**—(ಕೋಪದಿಂದ ಗರ್ಜಿಸಿ) ದೊಡ್ಡವರೆದುರಿಗೆ ಹೆಂಗಸಿಗೆಷ್ಟು ತಲೆಹರಟೆ? ಮುಚ್ಚು, ಬಾಯಿ ಮುಚ್ಚು.

**ಶಾಮಣ್ಣ.**—ಮಗುವನ್ನು ಗದರಿಸಬೇಡಿ, ಭಟ್ಟರೆ. ನಾವೆಲ್ಲರೂ ಇನ್ನೂ ಸತ್ತಿಲ್ಲ.

**ಸುಂದರಿ.**—(ನಿಟ್ಟುಸಿರು ಬಿಟ್ಟು) ನಾನು ಮಾತನಾಡುವುದೇ ಬಿಡುವುದೇ ಅಂತ ಯೋಚಿಸಿ ಯೋಚಿಸಿ ಸಾಕಾಗಿದೆ. ನನ್ನ ಕಡೆಗೆ ಹೇಳು ವವರೇ ಯಾರೂ ಇಲ್ಲ. ಅದಕ್ಕಾಗಿ ಯತ್ನವಿಲ್ಲದೆ ಮಾತನಾಡಬೇಕಾಗಿದೆ. ಹಳ್ಳಕ್ಕೆ ಬಿದ್ದಿರುವವಳನ್ನು ಮತ್ತೂ ಕೆಳಕ್ಕೆ ತುಳಿಯಬೇಡಿ. ನಾನು ತಲೆ ಹರಟೆಗಾಗಿ ಹೇಳಲಿಲ್ಲ. ನನ್ನ ದುಃಖ ದೇವರಿಗೇ ಗೊತ್ತು. (ಅಳುವಳು)

**ನಾಗಾಜೋಯಿಸ.**—ಸುಮ್ಮನಿರು ತಾಯಿ, ಅಳಬೇಡ. ಇವರಿಗೂ ನಿನ್ನ ಅವಸ್ಥೆಯಲ್ಲಿರುವ ತಂಗಿ ಇದ್ದರೆ ತಿಳಿಯುತ್ತಿತ್ತು. ಅವಳು ಪ್ರಾಣ ಕಳೆದುಕೊಳ್ಳುವುದಾಗಿ ಹೇಳಿದ್ದರೆ, ಆಗ ಮನಸ್ಸು ತಲ್ಲಣಿಸುತ್ತಿತ್ತು. . . . ತಂಗಿಯಿಲ್ಲದ ನಿಮಗೆ ಅದು ತಿಳಿಯುವ ಬಗೆ ಹೇಗೆ? ಈ ದುಃಖ ಯಾರಿಗೂ ಬರಬೇಡ.

**ನೀಲಕಂಠಭಟ್ಟ.**—ಎಂದಿಗೂ ಇಲ್ಲ. ಆಗ್ಗೆ ಶವಕ್ಕೇ ಮುಂಡನ ಮಾಡಿಸಿ ಅಗ್ನಿ ಸಂಸ್ಕಾರಮಾಡಿಸುತ್ತಿದ್ದೆ.

**ನಾಗಾಜೋಯಿಸ.**—ಇದು ಮೂರ್ಖತೆಯ ಪರಮಾವಧಿ. ಇದು ಬ್ರಾಹ್ಮಣನ ವಾಣಿಯಲ್ಲ; ಬ್ರಹ್ಮರಾಕ್ಷಸನ ವಚನ. ಕೋಪದ ಆವೇಶದಲ್ಲಿ ತಾನು ಹೇಳುವ ಹೇಯವಚನದ ಅಂತರವು ತನಗೇ ಅರ್ಥವಾಗದ ಉನ್ಮತ್ತಾಲಾಪ. ನೀವೆಂದಿಗೂ ಹಾಗೆ ಮಾಡುತ್ತಿರಲಿಲ್ಲ, ಗೋಳಾಡು ತ್ತಿದ್ದಿರಿ. ಶಖೆ ತಟ್ಟಿದವರ ಮಾತೇ ಬೇರೆ.

**ನೀಲಕಂಠಭಟ್ಟ.**—ನೀನು ಶಾಸ್ತ್ರಗಳನ್ನು ಓದಿದ್ದೂ ವ್ಯರ್ಥ. ವಿಷದ ಸಂಪರ್ಕವಾದ ನೀರಿನಂತೆ ಇಂಗ್ಲಿಷಿನಿಂದ ಶಾಸ್ತ್ರ ವ್ಯಾಸಂಗದ ಸ್ವಭಾವವೇ ಹಾಳಾಯಿತು.

**ನಾಗಾಜೋಯಿಸ.**—ಅದು ನಿಮ್ಮ ಮನಸ್ಸಿಗೆ ಹಾಗೆ ತೋರಿರ ಬಹುದು. ಇಂಗ್ಲಿಷು ಓದಿಲ್ಲದ ಶಾಮಭಟ್ಟರನ್ನು ನೋಡಿ. ವಿತಂತು ವಾದ ಮಗಳು ಸಕೇಶಿಯಾಗಿದ್ದರೂ ಸುಮ್ಮನಿದ್ದಾರೆ, ಕೊರಗುತ್ತಿದ್ದಾರೆ. ಶಾಸ್ತ್ರ ವ್ಯಾಸಂಗದಲ್ಲಿ ನಿಮಗಿಂತ ಕಡಿಮೆಯಿಲ್ಲದ ರಾಮಾಭಟ್ಟರನ್ನು ನೋಡಿ. ಅವರ ಸೊಸೆ ಮಡಿಯಾಗಲು ಇನ್ನೂ ಚಿಕ್ಕವಯಸ್ಸೆಂದು ಸುಮ್ಮನಿದ್ದಾರೆ.

**ಸುಂದರಿ.**—ನೀಲಕಂಠಭಟ್ಟರೆ! ಶಾಸ್ತ್ರವೆಂದಿರಿ. ಹೆಂಡತಿ ಸತ್ತರೆ ಗಂಡನಿಗೆ ಎಷ್ಟು ಮದುವೆಗಳು ಬೇಕಾದರೂ ಆಗಬಹುದು. ಗಂಡನೂ ಎರಡನೆಯ ಮದುವೆ ಮಾಡಿಕೊಳ್ಳಕೂಡದೆಂತ ಶಾಸ್ತ್ರವೇಕೆ ಹೇಳಲಿಲ್ಲ?

**ರಾಮರಾಯ.**—ಸುಂದರಿ! ಮುಚ್ಚು ಬಾಯಿ! ಪ್ರೀತಿಯಿಂದ ಸುಮ್ಮನಿದ್ದರೆ, ಹರಟೆಗೆ ಕೊನೆ ಮೊದಲೇ ಇಲ್ಲ.

**ಸುಂದರಿ.**—(ಅಳುತ್ತಾ) ನಿನ್ನ ಮಾತಿಗೆ ನಾನು ಹೇಳಲಿಲ್ಲಣ್ಣಾ. ಎಲೆಮರೆಕಾಯಿನ ಹಾಗಿದ್ದ ನಾನು, ಗಂಡುಬೀರಿಯಂತೆ ಮಾತನಾಡುವ ಹೊತ್ತು ಬಂದಿದೆ.

**ರಾಮರಾಯ.**—(ಕೋಪದಿಂದ) ಯಾರ ಮಾತಿಗಾದರೂ ಹೇಳಿಕೊ. . ನನಗೆ ಅದೊಂದೂ ಬೇಡ. ನಾಡಿದ್ದು ಮಡಿಯಾಗಲೇ ಬೇಕು. ಶಾಮಣ್ಣಾ, ನಿಮ್ಮ ಮನೆಯಿಂದ ಅವಳ ಟ್ರಂಕು, ಸಾಮಾನು, ಎಲ್ಲಾ ಕಳುಹಿಸಿಬಿಡು. ಮಡಿಯಾಗುವ ಮೊದಲು ಎರಡು ದಿನ ನಿಮ್ಮ ಮನೆಯಲ್ಲಿರಲಿ ಅಂತ ನೀನೂ ನಿನ್ನ ಹೆಂಡತಿ ಕರೆದುಕೊಂಡು ಹೋದಿರಿ. ಇವಳು ಪ್ರಾಣ ಕಳೆದುಕೊಳ್ಳು ತ್ತಾಳಂತೆ. ನಮ್ಮ ಮನೆಗೇ ಕಳುಹಿಸು. ಹಗರಣವಾದೀತು. ಸರ್ಪ ಕಾವಲಿದ್ದು ನೋಡಿಕೊಳ್ಳಬೇಕಾಗಿದೆ. . . . ಸಾಯುತ್ತಾಳಂತೆ.

**ಸುಂದರಿ.**—ನನ್ನ ಪ್ರಾಣ ನನ್ನ ವಶ. (ಅಳುತ್ತಾ) ವಿರೂಪ ವಾಗೋದಕ್ಕೆ ಮೊದಲೇ ಸತ್ತು, ಸ್ವರ್ಗದಲ್ಲಿ ಅವರ ಸಂಗಡ ಸುಖ ವಾಗಿರ್ತೀನಿ. ನಾನು ಸಾಯುವುದೇ ಸಿದ್ಧ.

**ಶ್ರೀಕಂಠಯ್ಯ.**—(ಪ್ರವೇಶಿಸಿ) ನೀನು ಸತ್ತರೆ, ನಾನೂ ಸಾಯುವೆನು.
(ಎಲ್ಲರೂ ಚಕಿತರಾಗುವರು. ಸುಂದರಿಯು "ಕಂಠೀ !" ಎಂದು ಅಳತೊಡಗುವಳು.)

**ರಾಮರಾಯ.**—ಇದೇನೊ ಕಂಠಿ! ರಜವಿಲ್ಲ. ಈಗ ಬಂದೆ? ಬರೆದೂ ಇರಲಿಲ್ಲ.

**ಶ್ರೀಕಂಠಯ್ಯ.**—ಅಕಸ್ಮಾತ್ತಾಗಿ ಬರಬೇಕಾಯಿತು, ಅಣ್ಣಾ.

**ಸುಂದರಿ.**—(ಅಳುತ್ತ) ಅಣ್ಣಾ ! ಇನ್ನು ಒಂದೆರಡೇ ವರುಷ. ಆಮೇಲೆ ನೋಡೋಣ. ಶ್ರೀವೈಷ್ಣವರಲ್ಲಿ ಕೆಲವರಲ್ಲಿ ತಲೆಕೂದಲು ತೆಗೆಸುವುದೇ ಇಲ್ಲ. ಪಾಟಿ ಮನೆಯವರು ಬ್ರಾಹ್ಮಣರಲ್ಲವೇನಣ್ಣಾ?

**ರಾಮರಾಯ.**—ಮುಚ್ಚು, ಬಾಯಿ ಮುಚ್ಚು. ನಾನು ಹೇಳಿದಂತೆ ನಡೆಯಬೇಕು. ನಾಡಿದ್ದು ಮದುವೆಯಾಗಲೇ ಬೇಕು.

**ಸುಂದರಿ.**—(ಅಳುತ್ತ) ನಾಡಿದ್ದು ನಾನಿರುವುದೇ ಇಲ್ಲ. ಕಂಠೀನೂ ನೋಡಿದಹಾಗಾಯಿತು.

**ಶಾಮಣ್ಣ.**—ಭಾವ! ಸುಂದರೀಗೂ ತಿಳಿಸದೆ ನಾನು ಇಲ್ಲಿನ ಹಗರಣವೆಲ್ಲಾ ಕಂಠೀಗೆ ಬರೆದು ಬರಹೇಳಿದ್ದೆ. ಅವನೂ ಬಂದಿದ್ದಾನೆ. ನೀನು ನಿಮ್ಮತ್ತೆ ಮಾತಿಗೂ, ಈ ನೀಲಕಂಠಭಟ್ಟರ ಮಾತಿಗೂ ಮರುಳಾದೆ. ನಾನೂ, ಕಂಠಿ, ಸುಂದರೀನ ಕೈಬಿಡಲಾರೆವು. ಅವನು ಬರದೇ ಹೋಗಿದ್ದರೂ ನಾನು ಸುಮ್ಮನಿರುತ್ತಿರಲಿಲ್ಲ.

**ಸುಂದರಿ.**—ಮಾವ ಎಂಥ ಉಪಕಾರ! ಕಂಠೀ! ಓದನ್ನೂ ಬಿಟ್ಟು ನನ್ನ ಸಹಾಯಕ್ಕೆ ಬಂದೆಯಾ?

**ರಾಮರಾಯ.**—ಜೋಕೆ! ನನಗೆ ಎದುರುಬಿದ್ದರೆ ಪೋಲೀಸು ಠಾಣೆ ನೋಡಬೇಕಾದೀತು. ಪೋಲೀಸು ಠಾಣೆ ನೋಡಿಸಿಯೇನು, ಎಚ್ಚರಿಕೆ!

**ಕುಂಭಕೋಣಂ.**—(ಪ್ರವೇಶಿಸಿ) ಅದು ಅಷ್ಟು ಸುಲಭವಲ್ಲ. ಸುಂದರಿ ಎಷ್ಟು ರೂಪವತಿ! ಈ ಚಿಕ್ಕವಯಸ್ಸಿಗೇ ವಿರೂಪ ಮಾಡುವುದು ಶುದ್ಧ ಅನ್ಯಾಯ. ನಾವು ಯಾರೂ ಇದಕ್ಕೆ ಅವಕಾಶಕೊಡುವುದಿಲ್ಲ.

**ಸುಂದರಿ.**—(ಬೆಚ್ಚಿ, ಅಣ್ಣನ ಬಳಿಗೆ ಬಂದು ಅಳುತ್ತ) ಕಂಠಿ! ನೀನು ಬೆಂಗಳೂರಿಗೇ ಹೋಗಿ ಸುಖವಾಗಿರು. ನಾನು ಪಾಪಿ. ನನ್ನಿಂದ ಯಾರಿಗೂ ಕಷ್ಟ ಬೇಡ. ನನ್ನಿಂದ ನಿಮ್ಮೆಲ್ಲರಿಗೂ ತೊಂದರೆಯಾದೀತು!

**ಕುಂಭಕೋಣಂ.**—ನೀನು ಸುಮ್ಮನಿರಮ್ಮ. ನಾವೆಲ್ಲಾ ನಿನ್ನ ಸಹಾಯಕ್ಕಿದ್ದೇವೆ.

**ಶ್ರೀಕಂಠಯ್ಯ.**—ಅಣ್ಣ! ನಾವೂ ಸೀತಮ್ಮನನ್ನು ಪ್ರೀತಿಸಿ ಭಕ್ತಿಯಿಂದಿದ್ದೆವು. ಎರಡನೆ ಮದುವೆಯಾದ ಮಾತ್ರವೇ ನಮ್ಮಲ್ಲಿ ಹೀಗೆ ನಡೆಯಬೇಕೆ? ಸುಂದರಿ, ಇವತ್ತಿನಿಂದ ನಾವಿಬ್ಬರೂ ಸಂನ್ಯಾಸಿಗಳು. ನೋಡೋಣ, ಏನು ಬಂದರೂ ನಾಸಿದ್ದೇನೆ. (ತೆರೆಯು ಬೀಳುವುದು.)

---

## ದೃಶ್ಯ ೩

[ರಾಜಾರಾಯ, ಗೋವಿಂದಯ್ಯ, ನರಸಿಂಹಯ್ಯ, ಶ್ರೀಕಂಠಯ್ಯ, ಇವರುಗಳು ಪ್ರವೇಶಿಸುವರು. ಸ್ಥಾನ: ಕಬ್ಬನ್ ಪಾರ್ಕಿನ ಒಂದು ಭಾಗ. ಕಾಲ: ಸುಮಾರು ಐದು ಗಂಟೆ.]

**ರಾಜಾರಾಯ.**—ರಜದ ದಿನ ಈ ಕಬ್ಬನ್ ಪಾರ್ಕ್ ಕೇಳೋರೆ ಇಲ್ಲಯ್ಯ.

**ಗೋವಿಂದಯ್ಯ.**—ಬ್ಯಾಂಡಿದ್ದ ದಿನ ನೋಡು, ಬಾ. ಜನ ತುಂಬಿತಾರೆ. ಒಂದು ರೇಡಿಯೋ ಸ್ಟೇಷನ್ನೂ ಬಂದು, ರಿಸೀವಿಂಗ್ ಸೆಟ್ಸ್ ಏನಾದರೂ ಬಂದುಬಿಟ್ಟರೆ ಆಗ ಯಾರೂ ಮನೆಗಳಿಗೇ ಹೋಗದೆ ಇಲ್ಲೇ ಇದ್ದು ಬಿಡ್ತಾರೋ ಏನೋ ಎನ್ನಿಸುತ್ತೆ.

**ಶ್ರೀಕಂಠಯ್ಯ.**—ಹೇಳಯ್ಯ, ನರಸಿಂಹಯ್ಯ, ಒಂದು ಸೊಗಸಾದ ಮಟ್ಟು ಹಾಡಬೇಕು.

**ನರಸಿಂಹಯ್ಯ.**—ಇವತ್ತು ಗಂಟಲು ಸರಿಯಾಗಿಲ್ಲ.

**ರಾಜಾರಾಯ.**—ಸಂಗೀತಗಾರರು ಗಂಟಲು ಸರಿಯಾಗಿದೆ ಅಂದ ದಿನವೇ ಇಲ್ಲ. ಹೇಳಯ್ಯ. ಶ್ರೀಕಂಠಯ್ಯನಿಗೆ ಮೊನ್ನೆ ತಾನೆ ಮದುವೆ ಯಾಗಿದೆ. ಇನ್ನೂ ಅರಿಸಿನದ ಮೈ. ಹಾಡು ಕೇಳಲಿ. ಹೇಳು.

**ನರಸಿಂಹಯ್ಯ.**—ಹೀಗೆ ನಿಂತುಕೊಂಡೇ ಹೇಳಬೇಕೇನಯ್ಯ?

**ಗೋವಿಂದಯ್ಯ.**—ಇಲ್ಲ. ಕಂಟೋನ್ಮೆಂಟಿನಿಂದ ಒಂದು ಸೋಫ ಬಾಡಿಗೆಗೆ ತಂದು ಹಾಕ್ತೀವಿ. ಆಗ ಹೇಳುವಿಯಂತೆ. ಹೇಳಯ್ಯ, ಕಂಡಿದ್ದಾರೆ. ಆಮೇಲೆ ಜಿ. ಆರ್. ಎಸ್. ಕಾಫಿ ಕ್ಲಬ್ಬಿನಲ್ಲಿ ಹೊಸ ಮದವಣಿಗ ನಮಗೆಲ್ಲಾ ಸೇವೆ ಅರ್ಪಿಸ್ತಾನೆ.

**ನರಸಿಂಹಯ್ಯ.**—ಯಾವುದಪ್ಪ, ಹೇಳಲಿ?

**ಶ್ರೀಕಂಠಯ್ಯ.**—ಯಾವುದಾದರೂ ನಾಟಕದ ಮಟ್ಟು ಹೇಳಯ್ಯ.

**ನರಸಿಂಹಯ್ಯ.**—("ಭಾಮಿನಿ ಬಾ ಮೋಹಿನಿ" ಹಾಡುವನು.)

**ರಾಜಾರಾಯ.**—ಈ ಮಹರಾಯ ಹಾಡು ಹೇಳಿದ್ದು ನಮಗೆ ತಿಂಡಿಗೆ ಚಕ್ಕರ್ ಬೀಳುತ್ತೋ ಏನೋ!

**ನರಸಿಂಹಯ್ಯ.**—ಅದೇಕಯ್ಯ?

**ರಾಜಾರಾಯ.**—ಇದೇ ಹಾಡು ಹೇಳಿಕೊಂಡು ಶ್ರೀಕಂಠಯ್ಯ "ಭಾಮಿನಿ ಬಾ ಮೋಹಿನಿ" ಅಂತ ಬಸವನಗುಡಿಗೆ ಓಡಿಬಿಟ್ಟರೆ ಗತಿ? ಸೆಕ್ರಿಟೇರಿಯಟ್ ಕಾಫಿ ಕ್ಲಬ್ಬಿಗೆ ಗಿರಾಕಿಹೋಯಿತು; ನಮಗೆ ತಿಂಡಿ ಸೊನ್ನೆ. (ಎಲ್ಲರೂ ನಗುವರು.)

**ಶ್ರೀಕಂಠಯ್ಯ.**—(ನಗುತ್ತ) ಸುಮ್ಮನೇ ಹಾಸ್ಯಮಾಡಿರಯ್ಯ. ಮಾಡಿ, ಮಾಡಿ.

**ನರಸಿಂಹಯ್ಯ.**—ಏನಯ್ಯ, ಗೋವಿಂದಯ್ಯ, ನೀನೂ ಮದುವೆ ಮಾಡಿಕೊಂಡು ಬಿಡಯ್ಯ. ನಮಗೆ ನೀನೂ ತಿಂಡಿಕೊಡಿಸಬಹುದು.

**ಗೋವಿಂದಯ್ಯ.**—ನಿಮಗೆ ತಿಂಡಿಕೊಡಿಸೋದಕ್ಕೆ ನಾನು ಮದುವೆ ಯಾಗಬೇಕೆಂತಲೋ ನಿನ್ನ ಸಲಹೆ? (ಎಲ್ಲರೂ ನಗುವರು.) ಮದುವೆ ವಿಷಯ ಹುಡುಗಾಟದ ವಿಚಾರವಲ್ಲ. ನಾನು ಆದರ್ಶ ರೀತಿಯಲ್ಲಿ ವಿವಾಹ ವಾಗುತ್ತೇನೆ.

**ರಾಜಾರಾಯ.**—ಓಹೋ, ನೀನು ವಿದೇಶೀ ಹುಡುಗಿ ಮದುವೆ ಯಾಗ್ತೀ ಅನ್ನು. ಅದೇ ತಾನೆ ಆದರ್ಶ ವಿವಾಹ! ಎಂದಯ್ಯ ಇಂಗ್ಲೆಂಡಿಗೆ ಪ್ರಯಾಣ?

**ಗೋವಿಂದಯ್ಯ.**—ಆದರ್ಶ ವಿವಾಹಕ್ಕೆ ಇಂಗ್ಲೆಂಡಿಗೇ ಹೋಗ ಬೇಕೇನು?

**ನರಸಿಂಹಯ್ಯ.**—ಹಾಗಲ್ಲ ರಾಜಾರಾವ್. ಅವನು ವಿಧವಾ ವಿವಾಹ ಮಾಡಿಕೊಳ್ತಾನೆಂತ ತೋರುತ್ತೆ. ಆದರ್ಶ ವಿವಾಹ. ಆಗಲೇಳು.

**ಗೋವಿಂದಯ್ಯ.**—ನಾನು ಹಾಗೇನೂ ಹೇಳಲಿಲ್ಲ. ಆ ಮಾತಿರಲಿ. ಬ್ರಾಹ್ಮಣ ಪಂಗಡದ ವಿಧವೆಯರ ಕಷ್ಟ ನೋಡಿದ್ದರೆ ನೀವು ಹೀಗೆಲ್ಲ

ಹುಚ್ಚು ಮಾತನಾಡುತ್ತಿರಲಿಲ್ಲ. ಬ್ರಹ್ಮ ಕೂಡ ನೇಣುಹಾಕಿಕೊಳ್ಳುವ ಹಾಗಿದೆ, ಅನೇಕ ಸಂದರ್ಭಗಳಲ್ಲಿ ಮನುಷ್ಯರಿಂದ ಅವರಿಗೆ ಬಂದಿರುವ ಕಷ್ಟ.

**ರಾಜಾರಾಯ.**—ಈ ಮಾತೆಲ್ಲ ಬೇಡಪ್ಪ. (ಶ್ರೀಕಂಠಯ್ಯನನ್ನು ಕುರಿತು) ಅಲ್ಲಯ್ಯ, ನಿಮ್ಮ ತಂದೆಗೆ ಎರಡನೇ ಮದುವೆ ಅಂತ ಹೇಳಿದ್ದೆ. ನಿನ್ನ ಮದುವೆಯಲ್ಲಿ ಹಸೆಯ ಮೇಲೆ ಕೂತಿದ್ದವರನ್ನ ನೋಡಿದರೆ ಆಕೆಗೆ ಮದುವೆ ಯಾದಾಗ ಇಪ್ಪತ್ತು ವರ್ಷವಾಗಿದ್ದಹಾಗಿತ್ತು.

**ಗೋವಿಂದಯ್ಯ.**—ಇದ್ದರೂ ಇರಬಹುದು. ಈ ಕಾಲದವರು.

**ನರಸಿಂಹಯ್ಯ.**—ಅಷ್ಟಿಲ್ಲದೆ ಇವನ ತಂಗಿ ಸಂಗೀತ ಪಾಠ ಹೇಳ್ತಾರೆಯೆ ?

**ಶ್ರೀಕಂಠಯ್ಯ.**—ಹಸೆಯ ಮೇಲೆ ಕೂತಿದ್ದವರು ನಮ್ಮ ಸೋದ ರತ್ತೆ. ವಿದ್ಯಮಾನವೇನೆನ್ನೋದನ್ನ ತಿಳಿಯದೆ ಮಾತನಾಡ್ತೀರಿ. ನನ್ನ ತಂಗಿ ಮಡಿಯಾಗೋದನ್ನ ತಪ್ಪಿಸಿ ಕರೆದುಕೊಂಡು ಬಂದೆ. ನಮ್ಮ ತಂದೆ ಕೋಪಿಸಿಕೊಂಡು ಹಣ ಕಳುಹಿಸದೆ ಹೋದರು. ನಾನು ಪ್ರೈವೇಟ್ ಟ್ಯೂಷನ್ ಹೇಳಿ ಸಂಪಾದಿಸಿದ್ದು ಜೀವನಕ್ಕೆ ಸಾಲದೆ ಹೋಯಿತು. ಆದರಿಂದ ನನ್ನ ತಂಗಿ ಸಂಗೀತದ ಪಾಠ ಹೇಳಿ ಹಣ ಸಂಪಾದಿಸಬೇಕಾ ಯಿತು. ನಡತೆಯೊಂದು ಸರಿಯಾಗಿದ್ದರೆ, ಯಾವ ಕಸಬಾದರೇನಂತೆ ?

**ರಾಜಾರಾಯ.**—ಅದೇನೋ ಸರಿ. ಸಂಗೀತಕ್ಕೆ ಬಿದ್ದರೆ ನಡತೆ ಕೆಟ್ಟು ಹೋಗುತ್ತಂತಲ್ಲ. ಅದರಲ್ಲಿಯೂ ಹೆಂಗಸರು ! ನಾನು ನಿನ್ನ ತಂಗಿ ಮಾತು ಹೇಳಲಿಲ್ಲ. ಅವರ ವಿಷಯ ಆಡಿದೆನೆಂತ ಕೋಪಿಸಿಕೊಳ್ಳಬೇಡ.

**ಶ್ರೀಕಂಠಯ್ಯ.**—ಅದೆಲ್ಲಾ ಅವರವರ ಸ್ವಭಾವದ ಮೇಲೆ ಹೋಗುತ್ತೆ. ನಮ್ಮ ನರಸಿಂಹಯ್ಯ ಹಾಡ್ತಾನೆ. ಈಗ ಕೆಟ್ಟುಹೋಗಿ ದ್ದಾನೋ ಅವನು ! ಕೆಡೋರು ಎಲ್ಲಿದ್ದರೂ ಕೆಡ್ತಾರೆ. ಒಳ್ಳೆಯವರು ಎಲ್ಲಿದ್ದರೂ ಭಯವಿಲ್ಲ.

**ರಾಜಾರಾಯ.**—ಇನ್ನೇನಯ್ಯ, ಒಳ್ಳೆಯ ಕಡೆ ಮದುವೆಯಾಗಿದೆ, ನಿನಗೆ. ನಿಮ್ಮ ಮಾವ ಅನುಕೂಲಸ್ಥರಂತೆ. ನಿನಗೆ ಈಸಲ ಬಿ.ಎ.

ಪ್ಯಾಸೂ ಆಗುತ್ತೆ. ಬೆಳಗ್ಗೆ ಸಂಜೆ ಮೆಂತ್ಯದ ದೋಸೆ ಮೆಲಕು ಹಾಕಿಕೊಂಡು ಹಾಯಾಗಿರು.

**ಶ್ರೀಕಂಠಯ್ಯ.**—ಪ್ಯಾಸಾಗಬೇಕಲ್ಲ......ಪ್ಯಾಸಾದರೂ ಕೆಲಸ ಸಿಕ್ಕಬೇಕಲ್ಲ.

**ಗೋವಿಂದಯ್ಯ.**—ಅನುಕೂಲವಾದ ಕಡೆ ಹೆಣ್ಣು ಸಿಕ್ಕಿದೆಯಲ್ಲ. ನಿನ್ನ ತಂಗಿ ಇನ್ನುಮೇಲೆ ಪಾಠ ಹೇಳಿ ಕಷ್ಟಪಡಬೇಕಾದ್ದೇ ಇಲ್ಲ.

**ಶ್ರೀಕಂಠಯ್ಯ.**—ನಮ್ಮ ಕಷ್ಟಗಳು ನಮಗೇ ಗೊತ್ತು.... ಇಷ್ಟಕ್ಕೂ ಸ್ವಂತ ಪ್ರಯತ್ನದಿಂದ ದುಡಿದು ಸಂಪಾದಿಸುವುದು ಮೈಗಳ್ಳತನದ ಜೀವನಕ್ಕಿಂತ ವಾಸಿಯೆಂತ ನನ್ನ ತಂಗಿ ಅಭಿಪ್ರಾಯ.

**ನರಸಿಂಹಯ್ಯ.**—ನಿನ್ನ ತಂಗಿ ಭೇಷಾಗಿ ಹಾಡ್ತಾರೆ. ನನ್ನ ಕೈಲೇಕೆ ನೀನು ಹಾಡಿಸಿದ್ದು?

**ಶ್ರೀಕಂಠಯ್ಯ.**—ಏನೋ ಮಹಾರಾಜಮಾನ್ಯರಾಜಶ್ರೀ ನರಸಿಂಹಯ್ಯನವರು ನಮ್ಮ ಸ್ನೇಹಿತರೆಂತ. ನೀನು ಹಾಡಿದ್ದಕ್ಕೆ ಬಹಳ ಕೃತಜ್ಞನಯ್ಯ. ನನ್ನ ತಂಗಿ ಚಿರದುಃಖಿನಿಯಯ್ಯ. ಹೊಟ್ಟೆಪಾಡಿಗಾಗಿ ಅವಳನ್ನ ಯತ್ನವಿಲ್ಲದೆ ಸಂಗೀತಪಾಠ ಹೇಳಲು ಸೇರಿಸಿದ್ದೇ ಹೊರತು, ಇನ್ನೇನೂ ಇಲ್ಲ. ಮನೆಯ ಕೆಲಸಗಳಾದಮೇಲೆ, ಅವುಗಳ ಜೊತೆಗೆ ಅವಳು ಸಂಗೀತಪಾಠ ಹೇಳಬೇಕಾಗಿದೆ. ಹಾಡು ಹೇಳೆಂದು ನಾನು ಬೇರೆ ಅವಳನ್ನ ಪೀಡಿಸಲೆ? ಸ್ವಲ್ಪ ಬಿಡುವಾಯಿತೆಂದರೆ, ಅವಳು ತನ್ನ ಸ್ಥಿತಿಯನ್ನೂ, ತನ್ನ ಗಂಡನನ್ನೂ, ನಮ್ಮಮ್ಮನನ್ನೂ ಸ್ಮರಿಸಿಕೊಂಡು ಕೊರಗುತ್ತಲೇ ಇರುತ್ತಾಳೆ. ಅವಳಿಗೆ ತೊಂದರೆ ಕೊಡುವುದು ಹೇಗೆ?

**ನರಸಿಂಹಯ್ಯ.**—ನಾನು ಹಾಡು ಹೇಳಿದ್ದಕ್ಕೆ ನಿನ್ನ ಕೃತಜ್ಞತೆ ಕಾಫೀ ರೂಪದಲ್ಲಿ ಪ್ರವಹಿಸಬೇಕು. ಶುಷ್ಕ ಕೃತಜ್ಞತೆ ನನಗೆ ಬೇಡ.

**ರಾಜಾರಾಯ.**—ಅದಕ್ಕೆ ಅನುಮಾನವೇ ಬೇಡ. ಒಪ್ಪಿಯೇ ಇರುವವನನ್ನು ಕೇಳುವುದೇಕಯ್ಯ?

**ಗೋವಿಂದಯ್ಯ.**—ಕಾಫಿ ತಿಂಡಿ ಅಷ್ಟು ಸುಲಭವಲ್ಲ ಸಿಕ್ಕೋದು. ಎಲ್ಲಿ? ಯಾವುದಾದರೂ ಒಂದು ಶ್ಲೋಕವನ್ನ ರಾಗಮಾಲಿಕೆಯಲ್ಲಿ ಹೇಳು. ಆಮೇಲೆ ಕಾಫಿ ತಿಂಡಿ.

**ನರಸಿಂಹಯ್ಯ.**—ಆಗಲಿ, ಕೇಳಿ. (ಶ್ಲೋಕವನ್ನು ಹಾಡುವನು.)

**ರಾಜಾರಾಯ.**—ಇನ್ನು ಹೋಗೋಣ. ಕಾಫಿ ತಿಂಡಿ ಆರಿ ಹೋದಾವು. ಬನ್ನಿ. (ಎಲ್ಲರೂ ಹೋಗುವರು.)

---

## ದೃಶ್ಯ ೪

[ಕುಂಭಕೋಣಂ ಮನೆ. ನಾಲ್ಕು ಸಾಮಾನ್ಯ ಕುರ್ಚಿಗಳಿರುವುವು. ಒಂದು ಮೇಜು. ಗೋಡೆಯ ಮೇಲೆ ಒಂದೆರಡು ಕ್ಯಾಲೆಂಡರುಗಳು. ಕೃಷ್ಣನು ರಾಧೆಯ ಕಣ್ಣುಗಳನ್ನು ಮುಚ್ಚುತ್ತಿರುವ ಚಿತ್ರಪಟ, ಮೋಹಿನಿಯ ಚಿತ್ರಪಟ, ಊರ್ವಶೀ ಪುರೂರವರ ಚಿತ್ರಪಟ, ಇವು ಇರುವುವು. ಒಂದು ಕಡೆ ಒಂದು ಅಂಗಿಯೂ, ಒಂದು ಷರಟೂ, ಒಂದು ವಲ್ಲಿಯೂ, ತಗಲಿಹಾಕಿರುವುವು. ಮೇಜಿನ ಮೇಲೆ ಕೆಲವು ಪುಸ್ತಕಗಳೂ ಕಾಗದಗಳೂ ಇರುವುವು. ಬರಿಯ ನೆಲ. ಕುರ್ಚಿಗಳೂ ಹಳೆಯುವು. ತೆರೆಯು ಮೇಲಕ್ಕೆ ಹೋಗುವ ವೇಳೆಗೆ ಕುಂಭಕೋಣಂ ಆಗಂತುಕನೊಬ್ಬನೊಡನೆ ಮಾತನಾಡುತ್ತ ನಿಂತಿರುವನು.]

**ಕುಂಭಕೋಣಂ.**—ಇನ್ನು ಕೊಂಚ ಹೊತ್ತು ಕುಳಿತುಕೊಳ್ಳಿ, ಸಾರ್.

**ಆಗಂತುಕ.**—ಇಲ್ಲ. ಬಹಳ ಕೆಲಸವಿದೆ. ಹೋಗಬೇಕು.

**ಕುಂಭಕೋಣಂ.**—ನಾನು ನಿಮ್ಮ ಮಿತ್ರನಾಗಿ ನಿಮ್ಮ ಒಳ್ಳೆಯದಕ್ಕೇ ಹೇಳುವುದು. ಐದು ಸಾವಿರ ರೂಪಾಯಿಗಳಿಗೆ ಇನ್‌ಷ್ಯೂರೆನ್ಸ್ ಮಾಡಿ ಬಿಡಿ. ನಮ್ಮ ಕಂಪೆನಿ ಭರ್ಜರೀ ಕಂಪನಿ.

**ಆಗಂತುಕ.**—(ಹೊರಟು) ನೋಡೋಣ. (**ಕುಂಭಕೋಣಂ ಅವನನ್ನು ಹಿಂಬಾಲಿಸುತ್ತಾ, "ನಾನು ಹೇಳುವುದು ಕೇಳಿ" ಎಂದುಕೊಂಡು ಹೊರಟು ಹೋಗುವನು.**)

**ರಾಜಮ್ಮ.**—(ಮನೆಯೊಳಗಿನಿಂದ ಪ್ರವೇಶಿಸಿ) ಇವರು ಅಗಸನ ಮಡಿಯ ಅಂಗಿಯನ್ನು ಹಾಕಿಕೊಂಡರು. ಬೇರೆ ಅಂಗಿಯ ಜೇಬಿನಲ್ಲಿದ್ದ ಸಾಮಾನು ಗಳನ್ನು ಜೇಬಿಗೆ ಸೇರಿಸುವ ಮೊದಲೇ ಆತ ಬಂದ. ಅವನೊಡನೆ ಹೊರಟೇ ಹೋದರು. (ಅಂಗಿಯ ಜೇಬಿನಿಂದ ಬೀಗದ ಕೈ ತೆಗೆದು ಮೇಜಿನ "ಡ್ರಾ" ತೆಗೆದು) ಅದೇನೋ ನೋಡಿ ನೋಡಿ ಪಿಗ್ಗುತ್ತಿದ್ದರು. ಬೀಗದ ಕೈಯೇ ಸಿಕ್ಕಿತು. (ಕೆಲವು ಹೆಂಗಸರ ತಸ್ವೀರುಗಳನ್ನು ಹೊರಕ್ಕೆ ತೆಗೆದು ನೋಡಿ ಕೋಪದಿಂದ) ಇದರ ಮೇಲೆಲ್ಲ ಏನೇನೋ ಬರೆದಿದ್ದಾರೆ....ಅಬ್ಬ....ಇದಕ್ಕೇ ಬೀಗದ ಕೈ ಕೊಡು ತ್ತಿರಲಿಲ್ಲ....ಮನೆಗೆ ಬರಲಿ....(ಒಂದು ಕಾಗದವನ್ನು ತೆಗೆದು ಓದಿ ನೋಡಿ ಮತ್ತಷ್ಟು ಕೋಪದಿಂದ) "ನನ್ನ ಮೋಹದ ಪ್ರಿಯಳಾದ ಶ್ರೀಮತಿ ಸುಂದರಿಯ ಸಮುಕ್ಷಮಕ್ಕೆ" ಎಂದಿದೆ. ಎಂಥ ಮನೆಹಾಳು ಕಾಗದ. ಇವಳನ್ನ ಇಲ್ಲಿಗೆ ಸಾಯಂಕಾಲ ಪಳೂವರೆ ಗಂಟೆಗೆ ಬರಹೇಳಿದ್ದಾರೆ....ನಾಟಕಕ್ಕೆ ಸೇರಿದವರ ಹಾಗೆ ಸಂಗೀತ ಕಲಿತ ಹೆಂಗಸು ನೆಟ್ಟಗಿರೋದುಂಟೆ? ರಹಸ್ಯ ವಂತೆ....ಒಬ್ಬಳೇ ಬರಬೇಕಂತೆ....ಅವಳೂ ಒಪ್ಪಿ ಇದರ ಮೇಲೆ ಬರುವುದಾಗಿ ಬರೆದಿದ್ದಾಳೆ. (ಕೋಪದಿಂದ ತಲೆದೂಗಿ) ಇರಲಿ....ಇನ್ನು ಬಂದಾರು. (ಕಾಗದವನ್ನು ಮಡಲಿನಲ್ಲಿಟ್ಟುಕೊಂಡು ಮೇಜಿಗೆ ಬೀಗವನ್ನು ಹಾಕಿ ಬೀಗದ ಕೈಯನ್ನು ಅಂಗಿಯ ಜೇಬಿಗೇ ಸೇರಿಸಿ, ಕೋಪದ ಆವೇಗದಿಂದ ಸ್ವಲ್ಪ ಸುತ್ತಾಡಿ) ದುಡುಕದೆ ಬಲೆಯಲ್ಲಿ ಹಿಡಿದು ಆಮೇಲೆ ಜೀವ ಹಿಂಡಬೇಕು. ಬುದ್ಧಿ ಕಲಿಸಬೇಕು.....(ಯೋಚಿಸಿ) ಹೀಗೋ....(ನೇಪಥ್ಯದ ಕಡೆಗೆ ನೋಡಿ) ಬಂದರು. (ಶಾಂತಳಾಗಿ ಏನನ್ನೂ ಅರಿಯದಂತೆ ನಿಲ್ಲುವಳು.)

**ಕುಂಭಕೋಣಂ.**—(ಪ್ರವೇಶಿಸಿ) ನೋಡಿದೆಯೋ, ಐದು ಸಾವಿರ ರೂಪಾಯಿನ ಬೇಟೆ ಹೇಗೆ ಜೇಬಿಗೆ ಬಿತ್ತು?

**ರಾಜಮ್ಮ.**—ನಿಮ್ಮ ಜೇಬಿಗೆ ಎಂಥೆಂಥ ಬೇಟೆ ಬೇಕಾದರೂ ಬೀಳುತ್ತೆ. (ಅವನು ಕಾಣನಂತೆ ಹುಬ್ಬು ಗಂಟಿಕ್ಕುವಳು.)

**ಕುಂಭಕೋಣಂ.**—(ಹಿಗ್ಗುತ್ತ) ನೋಡು ನನ್ನ ಸಾಹಸ.... ಅದಿರಲಿ. ನಾನು ಬಂದಾಗ ನೀನೇಕೆ ಚಿತ್ರದ ಬೊಂಬೆ ಹಾಗೆ ನಿಂತಿದ್ದೆ? ಏನು ಯೋಚಿಸುತ್ತಿದ್ದೆ?

**ರಾಜಮ್ಮ.**—(ಬಲವಂತವಾಗಿ ನಕ್ಕು) ನಿಮ್ಮ ಸಾಹಸಕ್ಕೆ ಎಣೆಯುಂಟೆ ಹೇಳಿ. ಯಾರ ಕಣ್ಣಿಗೆ ಬೇಕಾದರೂ ಮಣ್ಣೆರಚಬಲ್ಲಿರಿ. ನನಗೆ ಈ ದಿನ ಹರಿಕಥೆಗೆ ಹೋಗುವುದಕ್ಕಿಷ್ಟವಿಲ್ಲ.

**ಕುಂಭಕೋಣಂ.**—ಮೊದಲೇ ಒಪ್ಪಿದ್ದೆ. ಈಗ ಹೀಗೆ ಹೇಳ್ತೀಯೆ! ಹರಿಕಥೆ ಬಹಳ ಚೆನ್ನಾಗಿದೆಯಂತೆ. ನಾನಂತು ಆಚಾರವಿಲ್ಲದವನು. ಮತ ಧರ್ಮ ಅನುಸರಿಸದಿರುವವನು. ನೀನಾದರೂ ಹರಿಕಥೆ ಕೇಳಿ ಪುಣ್ಯ ಕಟ್ಟಿ ಕೊಂಡು, ಬಾ. ನಾನೂ ಬರ್ತಿದ್ದೆ. ನನಗೆ ಬಹಳ ಕೆಲಸವಿದೆ.

**ರಾಜಮ್ಮ.**—ಪಾಪ! ನಿಮಗೆ ತುಂಬ ಕೆಲಸ. ಒಂದೊಂದು ಸಲ ನಿಮ್ಮನ್ನು ನೋಡಿ ನನಗೆ "ಅಯ್ಯೋ" ಎನ್ನಿಸುತ್ತೆ.

**ಕುಂಭಕೋಣಂ.**—(ಸುಪ್ರೀತನಾಗಿ ಸಂತೋಷದಿಂದ) ಮುತ್ತಿನಂಥ ಹೆಂಡತಿ. ನಮ್ಮ ಹಿಂದೂ ಧರ್ಮ ಉಳಿದಿರೋದೇ ಹೆಂಗಸರಿಂದ ... ನೀನು ಹರಿಕಥೆಗೆ ಹೋಗು. ನಾನೂ ನೀನೂ ಇಬ್ಬರೂ ಹೊರಡೋಣ. ಅಲ್ಲಿ ಬಹಳ ಗಲಾಟೆ. ಆರಕ್ಕೇ ಹೊರಡದಿದ್ದರೆ ಸ್ಥಳ ಸಿಕ್ಕೋದಿಲ್ಲ, ನಾನು ನಿನ್ನ ಅಲ್ಲಿಗೆ ಬಿಟ್ಟು ಬರುತ್ತೇನೆ. ಆಮೇಲೆ ಮತ್ತೆ ಬಂದು ಕರೆದು ಕೊಂಡು ಬರುತ್ತೇನೆ.

**ರಾಜಮ್ಮ.**—ಎಲ್ಲಾ ಗಂಡಸರೂ ನಿಮ್ಮ ಹಾಗಿರೋದಿಲ್ಲ. ನನಗಾಗಿ ನೀವು ಎಷ್ಟು ಕಷ್ಟಕ್ಕೆ ಸಿದ್ಧವಾಗಿದ್ದೀರಿ! ಎಷ್ಟು ದಯೆ, ಎಷ್ಟು ಕರುಣ! ನೆರಬೀದಿಯ ಗೌರಮ್ಮನವರ ಜೊತೆಯಿದೆ. ನಾನು ಹರಿಕಥೆಗೆ ಹೋಗಿ ಬರುತ್ತೇನೆ. ಜೊತೆಗೆ ನೀವೇನೂ ಬರಬೇಕಾಗಿಲ್ಲ.

(ತೆರೆಯು ಬೀಳುವುದು. ಮತ್ತೆ ತೆರೆಯು ಮೇಲಕ್ಕೆ ಹೋಗುವುದು. ಆ ವೇಳೆಗೆ ಮೇಜಿನ ಮೇಲ್ಭಾಗಕ್ಕಿದ್ದ ವಿದ್ಯುಚ್ಛಕ್ತಿಯ ದೀಪವು ಹೊತ್ತಿಕೊಂಡಿರುವುದು. ಮೇಜಿನ ಮೇಲೆ ತಿಂಡಿ ಪೊಟ್ಟಣಗಳಿರುವುವು. ಕುಂಭಕೋಣಂ ಅಂಗಿಯನ್ನು ಬಿಚ್ಚಿ ಗೂಟಕ್ಕೆ ತಗಲಿಹಾಕುತ್ತಿರುವನು.)

**ಕುಂಭಕೋಣಂ.**—(ಸ್ವಗತ) ಇದೇಕೆ ಇನ್ನೂ ಬರಲಿಲ್ಲ? (ಮೇಜಿನ ಬಳಿಗೆ ಬಂದು) ನಾನು ಈ ತಿಂಡಿ ಪೊಟ್ಟಣಗಳನ್ನು ತರುವುದಕ್ಕೆ ಹೋಗಿದ್ದಾಗ ಬಾಗಿಲಿಗೆ ಬೀಗ ಹಾಕಿದ್ದದ್ದನ್ನು ನೋಡಿ ಸುಂದರಿ ಮನೆಗೇನಾದರೂ

ಹೊರಟು ಹೋಗಿರಬಹುದೆ? (ಬಾಗಿಲು ಬಡಿದ ಶಬ್ದವಾಗುವುದು.) ಈಗ ಬಂದಿರಬೇಕು, ನನ್ನ ಸಂತೋಷವೇ ಸಂತೋಷ.

(ಹೋಗಿ ಬಾಗಿಲನ್ನು ತೆಗೆದು ಸುಂದರಿಯು ಪ್ರವೇಶಿಸಿದ ಮೇಲೆ ಬರುವನು.)

**ಸುಂದರಿ.**—ಏಕೆ ಇಷ್ಟು ಅಗತ್ಯವಾಗಿ ನನ್ನನ್ನು ಕರೆಯಿಸಿದ್ದು?

**ಕುಂಭಕೋಣಂ.**—ಕೂತುಕೊ, ಸುಂದರಿ. (ಕುಳಿತುಕೊಳ್ಳುವಳು.) ನಿನ್ನ ಅಗತ್ಯವಿಲ್ಲದ್ದು, ಯಾವಾಗ?....ಸುಂದರಿ, ನೀನು ಎಷ್ಟು ರೂಪವತಿ!

**ಸುಂದರಿ.**—ಹೀಗೇಕೆ ಮಾತನಾಡುವಿರಿ?... ನನ್ನ ಬರಹೇಳಿದ್ದೇಕೆ?

**ಕುಂಭಕೋಣಂ.**—ನಾನು ನಿನ್ನ ರೂಪವನ್ನು ಕುರಿತು ಸುಮ್ಮನೆ ಹಾಗೆಂದೆ, ಅದಿರಲಿ. ನೀನು ನಿಮ್ಮಣ್ಣ ಕಾಣದಹಾಗೆ ಮಾರ್ವಾಡಿಯ ಹತ್ತಿರ ಸಾಲ ಮಾಡಬಾರದಾಗಿತ್ತು. ಈಗ ತಗಾದೆ ಬಲವಾಗಿದೆ.

**ಸುಂದರಿ.**—ಅಣ್ಣನ ಮದುವೆ ಒದಗಿತು. ಊರಿನಿಂದಲೂ ಯಾರೂ ಬರಲಿಲ್ಲ. ನಮ್ಮ ಮಾವನಿಗೂ ಒಡವೆ ತರುವ ಶಕ್ತಿಯಿರಲಿಲ್ಲ. ನಾನು ಸಂಗೀತದ ಪಾಠದ ಸಂಪಾದನೆಯಲ್ಲಿ ಹೊಟ್ಟೆಕಟ್ಟಿ ಹಣ ಉಳಿಸುವ ಯೋಚನೆ ಮಾಡಿದೆ. ಸಾಲ ತೀರಿಸಿಬಿಡಬಹುದೆಂದು ತೋರಿತು. ಸಾಲಮಾಡಿ ಒಡವೆ ಕೊಂಡುಕೊಟ್ಟೆ. ಇದೆಲ್ಲಾ ನಿಮಗೆ ತಿಳಿದೇ ಇದೆ.

**ಕುಂಭಕೋಣಂ.**—ಸರಿಯೆ....ಈಗ ತಗಾದೆ ಬಲವಾಗಿದೆ.

**ಸುಂದರಿ.**—ಇದುವರೆಗೂ ನನ್ನ ಸಂಪಾದನೆ ನಿಂತುಹೋಗಿತ್ತು. ಜನಗಳು ಸಹಾಯಮಾಡದಿದ್ದರೆ ಹೋಗಲಿ. ಬಡವರಿಗೆ ತೊಂದರೆ ಕೊಡದಿದ್ದರೆ ಸಾಕು. ಚಾಡಿ ಹೇಳಿ ಪುಣ್ಯಾತ್ಮರು ನನ್ನ ಸಂಗೀತದ ಪಾಠ ಕೂಡ ಬಿಡಿಸಿಬಿಟ್ಟರು. (ವಿಷಾದಪೂರಿತವಾದ ನಗುವಿನಿಂದ) ಅಲ್ಲಾ,......ನನಗೆ ಬಿಡಾರದ ಕೃಷ್ಣಪ್ಪನವರ ಹಾಗೆ ಪಾಠ ಹೇಳುವ ಶಕ್ತಿಯಿಲ್ಲವಂತೆ. ಬೆಂಗಳೂರಿನ ಕೆಲವರು ವಿದ್ವಾಂಸರ ಹಾಗೂ ನಾನು ಪಾಠ ಹೇಳಲಾರೆನಂತೆ. ಅವರಷ್ಟು ವಿದ್ಯೆ ನನಗಿರಬೇಕೆಂದರೆ ಸಾಧ್ಯವೆ? ಆಕ್ಷೇಪಣೆಮಾಡುವ ಜನರಿಗೆ ಕಣ್ಣಿಲ್ಲ. ಪಾಠ ಬಿಡಿಸಿ ಪುಣ್ಯ ಕಟ್ಟಿಕೊಂಡರು....ಹೋಗಲಿ....ಈಗ ಮತ್ತೆ ಪಾಠಗಳು ಸಿಕ್ಕಿವೆ. ಸಾಲ ತೀರಿಸುತ್ತೇನೆ.

**ಕುಂಭಕೋಣಂ.**—ಮಾರ್ವಾಡಿ ಸಾಹುಕಾರ ನಿಮ್ಮಣ್ಣನ್ನ ಕೇಳ್ತಾನಂತೆ.

**ಸುಂದರಿ.**—ನೀವು ಸಾಲಕೊಡಿಸಿ ತುಂಬ ಉಪಕಾರಮಾಡಿದ್ದೀರಿ. ಈಗ ಅವನು ಅಣ್ಣನನ್ನು ಹಣ ಕೇಳದಂತೆ ಮಾಡಿ ಕಾಪಾಡಿ. ಈ ಸಾಲದ ವಿಚಾರವೇ ನಮ್ಮ ಕಂಠೀಗೆ ತಿಳಿಯದು. ನೊಂದುಕೊಂಡು ಒಡವೆ ಬೇಡ ವೆಂದು ಹಠ ಹಿಡಿದಾನೆಂತ ನಾನು ಆಗ ತಿಳಿಸಲಿಲ್ಲ. ನನ್ನ ಸಂಪಾದನೆ ಹಣವೆಂತ ಸುಳ್ಳು ಹೇಳಿದ್ದೆ. ಇನ್ನು ಜನ್ಮಜನ್ಮಾಂತರಕ್ಕೂ ಇಂಥ ಸುಳ್ಳು ಕೂಡ ಹೇಳೋದಿಲ್ಲ.

**ಕುಂಭಕೋಣಂ.**—ಸುಂದರಿ! ನಿನ್ನ ರೂಪವೆಷ್ಟು ರಮಣೀಯ ವಾಗಿದೆ! ನಿಮ್ಮ ತಂದೆ ಇಂಥ ಮುದ್ದು ಮುಖಕ್ಕೆ ವಿರೂಪಮಾಡ ಬೇಕೆಂದಿದ್ದರಲ್ಲಾ! ನಿಮ್ಮಣ್ಣನ ಜೊತೆಗೆ ನಾನೂ ಸಹಾಯಮಾಡಿ ಅದನ್ನು ತಪ್ಪಿಸಿದ್ದು ಸರಿಯೇ ಆಯಿತು.

**ಸುಂದರಿ.**—ನಿಮ್ಮ ಸಹಾಯ ಅಷ್ಟಿಷ್ಟಲ್ಲ. ನಮ್ಮ ತಂದೆಯಲ್ಲಿ ತೋರಿಸುವಷ್ಟೇ ಗೌರವವನ್ನೂ ಪ್ರೀತಿಯನ್ನೂ ನಿಮ್ಮಲ್ಲಿ ತೋರಿಸುತ್ತೇನೆ. ನಮ್ಮ ತಂದೆಯ ಮನಸ್ಸು ಬಹಳ ಒಳ್ಳೆಯದು. ಆದರೆ ಅಜ್ಜಿಯ ಹಗರಣ ದಿಂದ ಹಾಗಾಗಿದೆ. ಇದೇನು, ಮನೆಯಲ್ಲಿ ನಿಮ್ಮ ಹೆಂಡತಿಯಿಲ್ಲವೇನು?

**ಕುಂಭಕೋಣಂ.**—(ತಿಂಡಿಯ ಪೊಟ್ಟಣಗಳನ್ನು ಅವಳಿಗೆ ಕೊಟ್ಟು) ಇಲ್ಲ. ಮಾರ್ವಾಡಿ ಸಾಹುಕಾರನ ಹತ್ತಿರ ನೀನು ಸಾಲಮಾಡಿರುವ ಸಂಗತಿಯು ಯಾರಿಗೂ ತಿಳಿಯಬಾರದೆಂತ ಅವಳನ್ನು ಹರಿಕಥೆಗೆ ಕಳುಹಿಸಿದ್ದೇನೆ. ತಿಂಡಿಯನ್ನು ತಿಂದು ನನ್ನ ಮನಸ್ಸನ್ನು ಸಂತೋಷಪಡಿಸು. (ನೀನೂ ತೆಗೆದು ಕೊಂಡು ನನಗೂ ಕೊಡು.)

**ಸುಂದರಿ.**—(ಕೃತಜ್ಞತೆಯನ್ನು ಸೂಚಿಸುವ ನಗುವಿನಿಂದ) ನೀವು ಎಷ್ಟು ಒಳ್ಳೆಯವರು!

**ಕುಂಭಕೋಣಂ.**—ಇನ್ನೇಕೆ ಮುಚ್ಚಿಡಲಿ! ಮಾರ್ವಾಡಿ ಸಾಹುಕಾರ ನಿನ್ನಮೇಲೂ ನಿಮ್ಮಣ್ಣನ ಮೇಲೂ ದಾವಾ ಅರ್ಜಿ ಬರೆದಿಟ್ಟು ಕೊಂಡಿದ್ದಾನೆ. ನಾಳೆಯೇ ದಾವಾ ದಾಖಲಾಗುತ್ತೆ.

**ಸುಂದರಿ.**—ಅಯ್ಯೋ, ಇನ್ನೇನು ಗತಿ! ನೀವೇ ತಪ್ಪಿಸಬೇಕು.

**ಕುಂಭಕೋಣಂ.**—ನಿಮ್ಮಣ್ಣನಿಗೆ ಕೆಲಸವಾಗಿದೆ. ತೀರಿಸಬಹುದಲ್ಲ.

**ಸುಂದರಿ.**—ಇನ್ನೂ ಮೊದಲನೆಯ ತಿಂಗಳೇ ಪೂರ್ತಿಯಾಗಿಲ್ಲ. ಅವರ ಮಾವ ಸ್ವಲ್ಪ ಹಣ ಕೊಟ್ಟಿದ್ದಾರೆ. ನನ್ನ ಪಾಠದ ಹಣವೂ ಸ್ವಲ್ಪ ಬರುತ್ತೆ. ಇವೆರಡರಿಂದ ಜೀವನ ನಡೆಯುತ್ತಿದೆ. ದಾವಾ ಹೇಗಾದರೂ ತಪ್ಪಿಸಿ. ಅತ್ತಿಗೆಯೂ ಅಣ್ಣನೂ ಸುಖವಾಗಿರಲಿ. ಈಗ ದಾವಾ ಆದರೆ ಅವರ ಸುಖಕ್ಕೆ ಹುಳಿ ಹಿಂಡಿದ ಹಾಗಾಗುತ್ತೆ. ನಮ್ಮ ಕುಲದ ಸಂತೋಷಕ್ಕಾಗಿ ಸಾಯುವುದೂ ನನಗೆ ಸುಖ.

**ಕುಂಭಕೋಣಂ.**—ಮಾರ್ವಾಡಿ ಸಾಹುಕಾರ ಯಮನ ಅಂಶ. ಅವನಲ್ಲಿ ಕರುಣವಿಲ್ಲ. ನಾನು ಮೊದಲಿನಿಂದಲೂ ನಿನ್ನ ಮೇಲೆ ಪ್ರೀತಿಯಿಟ್ಟು ಸಹಾಯ ಮಾಡ್ತಿದ್ದೇನೆ.

**ಸುಂದರಿ.**—ನಾನೂ ನಿಮ್ಮಲ್ಲಿ ತುಂಬ ಪ್ರೀತಿಯಿಂದಿದ್ದೇನೆ. ಈಗಲೂ ಸಹಾಯಮಾಡಿ.

**ಕುಂಭಕೋಣಂ.**—(ಸಂತೋಷದಿಂದ) ನನ್ನಲ್ಲಿ ಪ್ರೀತಿಯಿದೆಯೆ! ಹಾಗಾದರೆ ನಾನು ಊಹಿಸಿದ್ದು ಸರಿಯಾಯಿತು. ಸುಂದರಿ! ಪ್ರಿಯಳೆ!

**ಸುಂದರಿ.**—(ಸರಕ್ಕನೆ ಎದ್ದು ನಿಂತು) ಏನೆಂದಿರಿ?

**ಕುಂಭಕೋಣಂ.**—(ಉತ್ಸಾಹದಿಂದ) ಈ ಹುಸಿಮುನಿಸೇಕೆ, ಹೇಳು. ಸುಂದರಿ! ನಿನ್ನ ರೂಪವು ಕಾಡಿನ ಬೆಳದಿಂಗಳಾಗುತ್ತಿದೆ. ಅದನ್ನು ಸಾರ್ಥಕಗೊಳಿಸು. ನನ್ನನ್ನು ಸಂತೋಷಪಡಿಸು. ದಾವೆಯು ನಡೆಯುವುದನ್ನು ತಪ್ಪಿಸುತ್ತೇನೆ.

**ಸುಂದರಿ.**—(ಕೋಪದಿಂದ) ನೀಚ! ಇಂಥ ಯೋಚನೆಯೆ! ನಾಚಿಕೆಯಾಗುವುದಿಲ್ಲವೆ? ನಾನು ಒಡಹುಟ್ಟಿನಂತೆ ಭಾವಿಸಿ ಪ್ರೀತಿಸುತ್ತಿದ್ದೆ. ಪಾಪಿ! ಹೀಗಿದೆಯೇ ನಿನ್ನ ಮನಸ್ಸು!

**ಕುಂಭಕೋಣಂ.**—ನೀನು ನನ್ನ ಕೈಯಿಂದ ಪಾರಾಗಲಾರೆ. ಬಾಗಿಲನ್ನು ಭದ್ರಪಡಿಸಿದ್ದೇನೆ. ನನ್ನ ಹೆಂಡತಿಯನ್ನು ಸಾಗಿಸಿಬಿಟ್ಟಿದ್ದೇನೆ.

**ರಾಜಮ್ಮ.**—(ಕೋಪದಿಂದ ಉರಿಯುತ್ತ ಮನೆಯೊಳಗಿನಿಂದ ಪ್ರವೇಶಿಸಿ) ಸಾಗಿಸುವುದಕ್ಕೆ ನಿಮ್ಮ ಹೆಂಡತಿ ಇನ್ನೂ ಹೆಣವಾಗಿಲ್ಲ. ಅಬ್ಬ! ಸಾಗಿಸುವುದಕ್ಕೆ ನಾನೇನು ಹೆಣವೆ?

**ಕುಂಭಕೋಣಂ.**—(ಅಪ್ರತಿಭನಾದರೂ ಆಶ್ಚರ್ಯದಿಂದ) ನೀನು ಬಂದ ಬಗೆ!

**ರಾಜಮ್ಮ.**—ಕೇಳಿ ಸಂತೋಷಪಡಿ. ನಾನು ಬೀದಿಯ ಬಾಗಿಲಿಗೆ ಬೀಗ ಹಾಕುವಾಗಲೇ ಹಿತ್ತಿಲು ಬಾಗಿಲಿಗೆ ಅಗಣಿಹಾಕದೆ ಬಿಟ್ಟಿದ್ದೆ. (ಮಡುಲಿನಿಂದ ಕಾಗದವನ್ನು ತೆಗೆದು) ಈ ಕಾಗದ ನೋಡಿದಾಗಲೇ ಎಲ್ಲಾ ನಿರ್ಧರಿಸಿದ್ದೆ. ನೀವು ಮೇಜಿನಲ್ಲಿಟ್ಟುಕೊಂಡಿರುವ ಮನೆಹಾಳು ಚಿತ್ರಗಳನ್ನೂ ನೋಡಿದೆ. ನಿಮ್ಮ ಪಾಪಕ್ಕೆ ದೇವರೇ ಶಿಕ್ಷೆಮಾಡಬೇಕು. (ಕುಂಭಕೋಣಂ ತಲೆತಗ್ಗಿಸಿಕೊಂಡು ನಿಂತಿರುವನು.) ಸುಂದರಮ್ಮ! ತೆಗೆದುಕೊಳ್ಳಿ, ಈ ಕಾಗದವನ್ನು. ನೀವು ಹೋಗಿ. ಸರಕದಂತಿರುವ ಈ ಮನೆಯಲ್ಲಿರಬೇಡಿ.

**ಸುಂದರಿ.**—ನೀವು ನನ್ನ ಭಾಗದ ದೇವರಂತೆ ಬಂದು ಕಾಪಾಡಿದಿರಿ. ನಾನು ಬದುಕಿದೆ. (ಕಾಗದವನ್ನು ತೆಗೆದುಕೊಂಡು ಹೋಗುವಳು.)

**ರಾಜಮ್ಮ.**—(ಸ್ವಲ್ಪ ಹೊತ್ತು ಸುಮ್ಮನಿದ್ದು) ಮನೆಹಾಳು ವಿದ್ಯೆ, ಮೋಹದ ಪ್ರಿಯಳಂತೆ. ಬರೆಯುವುದಕ್ಕಾದರೂ ನಾಚಿಕೆಯಾಗಲಿಲ್ಲವೇನೊ! ನನ್ನ ದುರದೃಷ್ಟಕ್ಕೆ ಯಾರು ಹೊಣೆ!

**ಕುಂಭಕೋಣಂ.**—(ಸ್ವಲ್ಪಕಾಲ ಮೌನವಾಗಿದ್ದು) ನನ್ನ ಇಷ್ಟ. ನಿನಗೇಕೆ ಇದೆಲ್ಲಾ ಪಾರಪತ್ಯ?

**ರಾಜಮ್ಮ.**—(ಕೋಪದಿಂದ) ಹೌದು, ನಿಮ್ಮ ಇಷ್ಟತಾನೆ. ಹೆಂಗಸರು ಒಂದು ಹಿಡಿ ಅನ್ನಕ್ಕೆ ಗಂಡಸರ ಕೈಕಾಯಬೇಕಾಗಿದೆ. ಅದರಿಂದ. . . .

(ನೇಪಥ್ಯದಿಂದ "ರಾಜಮ್ಮನವರೇ, ಹಿತ್ತಿಲು ಬಾಗಿಲು ಹಾರುಹೊಡೆದಿತ್ತು. ಹೀಗೇ ಒಳಕ್ಕೆ ಬಂದೆ. ಉತ್ಸವ ಹೊರಡುವ ಹೊತ್ತಾಯಿತು. ದೇವಸ್ಥಾನಕ್ಕೆ ಬರ್ತೀರಾ?" ಎಂದು ಕೇಳಿಸುವುದು.)

**ರಾಜಮ್ಮ.**—ಅಯ್ಯೋ! ಹಿತ್ತಿಲು ಬಾಗಿಲು ತೆಗೆದೇ ಬಂದಿದ್ದೇನೆ. ಈ ಮನೆಗೆ ಕಾಂಪೌಂಡೂ ಇಲ್ಲ. ಯಾರಾದರೂ ಬಂದು ಸಾಮಾನು ದೋಚಿಕೊಂಡು ಹೋಗಿದ್ದರೆ ಗತಿಯೇನು? ಬುದ್ಧಿಯೇ ಸ್ವಾಧೀನದಲ್ಲಿಲ್ಲ. ಬಂದೆ, ಬಂದೆ, ಸಾಕಮ್ಮನವರೇ. ನಾನು ಉತ್ಸವಕ್ಕೆ ಬರುವ ಹಾಗಿಲ್ಲ. ಸ್ವಲ್ಪ ಕೆಲಸವಿದೆ. ಬಂದೆ, ಬಂದೆ. (ಗಂಡನ ಕಡೆಗೆ ನೋಡಿ ಹುಬ್ಬು ಗಂಟಿಕ್ಕಿಕೊಂಡು ಹೋಗುವಳು.)

**ಶೇಷಗಿರಿರಾಯ.**—(ಪ್ರವೇಶಿಸಿ) ಏನು, ಹೀಗೆ ಕೂತಿದ್ದೀರಿ? ಒಬ್ಬರೇ ಇರುವ ಹಾಗಿದೆ. ನಿಮ್ಮ ಕುಟುಂಬ ಮನೆಯಲ್ಲಿದ್ದಹಾಗಿಲ್ಲ.

**ಕುಂಭಕೋಣಂ.**—ಬನ್ನಿ ಸಾರ್, (ಮೇಲಕ್ಕೆದ್ದು) ದಯಮಾಡಿ, ಶೇಷಗಿರಿರಾಯರೆ! ಹೆಂಗಸು ಹರಿಕಥೆಗೆ ಹೋಗಿದ್ದಾಳೆ. ಇದೇನು, ಇಷ್ಟು ಅಪರೂಪವಾಗಿ ದಯಮಾಡಿಸಿದ್ದು?

**ಶೇಷಗಿರಿರಾಯ.**—ನಮ್ಮ ಚಿಕ್ಕಹುಡುಗನ ಹೆಸರಿಗೂ ಒಂದು ಇನ್‌ಷ್ಯೂರೆನ್ಸ್ ಪಾಲಿಸಿ ತೆಗೆಯೋಣವೆಂತ ನಿಮ್ಮ ಮನೆಗೆ ಬರುತ್ತಿದ್ದೆ.... ಆ ಮಾತಿರಲಿ. ನನ್ನ ಅಳಿಯನ ತಂಗಿ—ಸುಂದರಿ—ಇಲ್ಲಿಗೆ ಬಂದಿದ್ದ ಹಾಗಿತ್ತು. ಎದುರಿಗೆ ಸಿಕ್ಕಿದಳು. ಅವಳೇಕೆ ಬಂದಿದ್ದಳು?

**ಕುಂಭಕೋಣಂ.**—(ಪೆಚ್ಚು ಮುಖದಿಂದ) ಏನೋ ಬಂದಿದ್ದಳು.

**ಶೇಷಗಿರಿರಾಯ.**—ಅವಳು ಸರಸರನೆ ಹೋಗುತ್ತಿದ್ದಳು. ಆ ರಭಸದಲ್ಲಿ ಮೈಮರೆತು ಕಾಗದವನ್ನು ಕೆಡವಿಕೊಂಡು ಹೋಗಿದ್ದಳೆಂತ ತೋರುತ್ತೆ. (ಹೊರಡಲನುವಾಗಿ) ಅದು ಸಿಕ್ಕಿತು. ಎಲೆಕ್ಟ್ರಿಕ್ ಪೋಸ್ಟಿನ ಬಳಿ ಓದಿಕೊಂಡೆ. ನೀವು ಇಂಥ ಕೆಲಸಮಾಡುವಿರೆಂದಿರಲಿಲ್ಲ. ನಿಮಗೆ ನಡೆಯಬೇಕಾದ ಮರ್ಯಾದೆ ವಿಚಾರ ಆಮೇಲೆ ಯೋಚಿಸುತ್ತೇನೆ. ಮನೆಯಲ್ಲಿ ನಿಮ್ಮ ಹೆಂಡತಿಯೂ ಇರಲಿಲ್ಲ, ನಿರುಪಾಧಿಕವಾಗಿತ್ತು.

**ಕುಂಭಕೋಣಂ.**—ನನ್ನ ಹೆಂಡತಿ ಒಳಗಿದ್ದಾಳೆ.

**ಶೇಷಗಿರಿರಾಯ.**—ನೀವೇ ಹೇಳಿದಿರಿ, ಅವರು ಹರಿಕಥೆಗೆ ಹೋಗಿದ್ದಾರಂತ. ಒಂದು ಸುಳ್ಳು ದಕ್ಕಿಸಿಕೊಳ್ಳೋದಕ್ಕೆ ಈಗ ಬೇರೆ ಸುಳ್ಳು. (ಹೋಗುವನು.)

(ತೆರೆ ಬೀಳುವುದು.)

---

## ದೃಶ್ಯ ೫

[ಬೆಂಗಳೂರಿನ ಲಾಲ್‌ಬಾಗಿನ ಒಂದು ಭಾಗ. ಶೇಷಗಿರಿರಾಯನೂ, ಅವನ ಹಿಂದೆ ಖಿನ್ನಮನಸ್ಕನಾದ ಶ್ರೀಕಂಠಯ್ಯನೂ ಪ್ರವೇಶಿಸುವರು.]

**ಶೇಷಗಿರಿರಾಯ.**—ಕಂಠಿ! ನೀನು ಸಮಾಧಾನಮಾಡಿಕೊಳ್ಳಬೇಕು. ನಾನು ನಿನ್ನೆ ರಾತ್ರಿಯೇ ಒಂದು ನಿನಗೆ ಹೇಳಬೇಕೆಂದಿದ್ದೆ. ಆದರೆ ಆತುರಪಡಬಾರದೆಂತ ಸುಮ್ಮನಾದೆ. ಈಗ ನಿನ್ನ ಲಾಲ್‌ಬಾಗಿಗೆ ಕರೆದುಕೊಂಡು ಬಂದದ್ದೂ ಇದನ್ನು ಹೇಳುವುದಕ್ಕೋಸ್ಕರವೇ. ನಾವಿಬ್ಬರೇ ಇದ್ದು ರಹಸ್ಯವಾಗಿ ಹೇಳಬೇಕೆಂತ ಹಾಗೆ ಮಾಡಿದೆ.

**ಶ್ರೀಕಂಠಯ್ಯ.**—ನಿಜವೆ? ಇದೆಲ್ಲಾ ನಿಜವೆ?

**ಶೇಷಗಿರಿರಾಯ.**—ಸುಳ್ಳು ಹೇಳಬೇಕೆಂತ ನನಗೆ ಆಸೆಯೆ? ಇಲ್ಲವೇ ನನಗೇನಾದರೂ ಹುಚ್ಚೋ? ನೀನು ಆ ಕುಂಭಕೋಣಂ ಮುಖ ಪೆಚ್ಚುಬಿದ್ದಿದ್ದ ಒಗೆ ನೋಡಬೇಕಾಗಿತ್ತು.

**ಶ್ರೀಕಂಠಯ್ಯ.**—(ನಿಟ್ಟುಸಿರು ಬಿಟ್ಟು) ನನಗೆ ದಿಕ್ಕೇ ತೋರದು.

**ಶೇಷಗಿರಿರಾಯ.**—(ಜೇಬಿನಿಂದ ಗಡಿಯಾರವನ್ನು ತೆಗೆದು ನೋಡಿ) ನಾಲ್ಕೂವರೆ ಗಂಟೆಯಾಯಿತು. ನೀನು ಯೋಚಿಸಬೇಡ. ನೀನು ಮುಂದೆ ಬದುಕಿ ಬಾಳುವ ಹುಡುಗ. ಬಿ.ಎ. ಪ್ಯಾಸಾಗಿದೆ. ಬಿ.ಎ. ಪ್ಯಾಸಾದವರು ಎಷ್ಟೋ ಜನ ದಿವಾನ್‌ಗಿರಿ ಮಾಡಿದ್ದಾರೆ. ನಮ್ಮ ಹುಡುಗಿ ಅದೃಷ್ಟ ಚೆನ್ನಾಗಿದ್ದರೆ ನೀನೂ ಏಕೆ ದಿವಾನ್‌ಗಿರಿ ಮಾಡಬಾರದು? ಬೇಕಾದಹಾಗೆ prospects ಇದೆ. ಅವಳ ಜಾತಕವಂತೂ ನನಗೇ ಆಶ್ಚರ್ಯವಾಗುವ ಹಾಗಿದೆ. ಹೀಗಿರುವಾಗ ಯೋಗ್ಯತೆ ಉಳಿಸಿಕೊಂಡಿರಬೇಕಾದ್ದು ಬಹಳ ಮುಖ್ಯ.

ಆ ಸುಂದರಿ ಸಂಗೀತ ಪಾಠ ಹೇಳುತ್ತಿದ್ದದ್ದೇ ಅವಮಾನಕರವಾಗಿತ್ತು. ಈ ಹಗರಣದಿಂದ ನಾವು ತಲೆಯೆತ್ತಿಕೊಂಡಿರುವ ಹಾಗೇ ಇಲ್ಲ. ಈಗಲೇ ಅವಳನ್ನ ಹೊರಡಿಸಬೇಕು.

**ಶ್ರೀಕಂಠಯ್ಯ.**—ಅಯ್ಯೋ! ನಮ್ಮ ತಂದೆ ದುಡ್ಡು ಕಳುಹಿಸದೆ ಕೋಪದಿಂದ ಕೈಬಿಟ್ಟಾಗ ಅವಳು ಸಂಗೀತ ಪಾಠ ಹೇಳಿ ದುಡಿದು, ತಂದೆ ಹಾಗೆ ಹಣ ಸಂಪಾದಿಸಿ, ತಾಯಿ ಹಾಗೆ ಮನೆಕೆಲಸಮಾಡಿ ಕಾಪಾಡಿ ದಳು. ತಂದೆ, ತಾಯಿ, ತಂಗಿ, ಮೂರೂ ಒಬ್ಬಳೇ ಆಗಿದ್ದಳು.

**ಶೇಷಗಿರಿರಾಯ.**—ಇರಬಹುದಯ್ಯ, ಈಗ ಇಂಥ ಕೆಲಸಮಾಡಿ, ನಾವೆಲ್ಲರೂ ತಲೆತಗ್ಗಿಸುವ ಹಾಗೆ ಮಾಡಿದ್ದಾಳಲ್ಲ.

**ಶ್ರೀಕಂಠಯ್ಯ.**—ಅವಳು ನನಗೋಸ್ಕರ ಎಷ್ಟು ದುಡಿದಿದ್ದಾಳೆ! ಎಷ್ಟು ಸಂತೋಷದಿಂದ ದುಡಿದಿದ್ದಾಳೆ! ನಾನು ಕಾಯಿಲೆಯಾಗಿದ್ದಾಗ ಎಷ್ಟು ಆದರದಿಂದ ಉಪಚಾರಮಾಡಿದ್ದಾಳೆ! ಯಾವ ತಾಯಿಗೂ ಆ ಮಮತೆಯಿಲ್ಲ.

**ಶೇಷಗಿರಿರಾಯ.**—ಅದೆಲ್ಲಾ ಸರಿಯೆ. ಆದರೂ ಈಗ ಜನಕ್ಕೆ ಹೆದರುವ ಹೊತ್ತು ಬಂದಿದೆ. ನೀನು ಕೆಟ್ಟ ನಡತೆಯುವಳ ಅಣ್ಣನೆಂದು ತಿಳಿದರೆ ಸರ್ಕಾರಿ ಕೆಲಸ ಉಳಿಯುವುದೂ ಕಷ್ಟವಾಗಬಹುದು. ಇನ್ನೂ ಒಂದು ತಿಂಗಳೂ ಪೂರ್ತಿಯಾಗಿಲ್ಲ. ಕೆಲಸ ಖಾಯಂ ಆಗಬೇಕೋ ಬೇಡವೊ?

**ಶ್ರೀಕಂಠಯ್ಯ.**—ಅವಳು ಕೆಟ್ಟನಡತೆಯುವಳೆ! ನನ್ನ ಕಿವಿಗಳನ್ನು ನಾನೇ ನಂಬಲಾರೆ.

**ಶೇಷಗಿರಿರಾಯ.**—ಅಯ್ಯೋ ಹುಚ್ಚ! ನೀನೂ ನೋಡಿರಲಿಲ್ಲ ವೇನಯ್ಯ! ಆ ಕುಂಭಕೋಣಂ ನಿಮ್ಮ ಮನೆಗೆ ಬಂದಾಗಲೆಲ್ಲ ನಿನ್ನ ತಂಗಿ ಏನಾದರೂ ಒಂದು ನೆವ ತೆಗೆದುಕೊಂಡು ಹೋಗಿ ಅವನ ಸಂಗಡ ಪ್ರತ್ಯೇಕ ವಾಗಿ ಮಾತನಾಡುತ್ತಿದ್ದ ಬಿನ್ನಾಣವನ್ನ.

**ಶ್ರೀಕಂಠಯ್ಯ.**—ನೀವು ಕೋಪಿಸಿಕೊಳ್ಳದೆ ಇದ್ದರೆ ನಾನೊಂದು ಸಂಗತಿ ಹೇಳುತ್ತೇನೆ. ನಾವು ಹೆಂಗಸರಿಗೆ ಬಹಳ ಅನ್ಯಾಯಮಾಡಿದ್ದೇವೆ.

ಕುಂಭಕೋಣಂ ನಮ್ಮ ಮನೆಯವರಿಗೆ ಬಹಳ ಪರಿಚಿತರು. ದೂರದ ನಂಟರು. ನಮ್ಮ ಮನೆಗೆ ಪದೇ ಪದೇ ಬರುತ್ತಿದ್ದ ಸಲಿಗೆ. ಆದಕಾರಣ, ಸುಂದರಿ ಆತನೊಡನೆ ಮಾತನಾಡಿರಬಹುದು.

**ಶೇಷಗಿರಿರಾಯ.**—ಮಾತನಾಡಲಿ. ಅದಕ್ಕೇನೂ ಆಕ್ಷೇಪಣೆಯಿಲ್ಲ. ನಿನ್ನೆದುರಿಗೇ ಮಾತನಾಡಬಹುದಾಗಿತ್ತಲ್ಲ. ಅವಳು ಪ್ರತ್ಯೇಕವಾಗಿ ಹೋಗಿ ಮಾತನಾಡುತ್ತಿದ್ದುದೇಕೆ? ನಿನ್ನೆಯ ರಾತ್ರಿ ನಾನು ಅವನ ಮೂಳೆಗಳನ್ನೇ ನುಗ್ಗಿಬಿಡಬೇಕೆಂದಿದ್ದೆ. ಆದರೆ ವಿಷಯ ಬಹಿರಂಗವಾಗಿ ನಮ್ಮ ಹುಡುಗಿ ಕೆಟ್ಟಮನೆಗೆ ಸೇರಿದಳೆಂತ ಅವಮಾನವಾದೀತೆಂದು ಹೆದರಿ ನನ್ನ ಕೋಪವನ್ನೆಲ್ಲ ನುಂಗಿದೆ. ಹೋಗಲಿ. ನಾನೆಷ್ಟು ಹೇಳಿದರೂ ನಿನಗೆ ನಂಬಿಕೆಯಿಲ್ಲವಲ್ಲಾ. ಇಷ್ಟಾದರೂ ಯೋಚಿಸಿ ನೋಡು. ಅವನ ಹೆಂಡತಿ ಮನೆಯಲ್ಲಿಲ್ಲದ ವೇಳೆ. ರಾತ್ರಿಯ ಹೊತ್ತು. ನಿನ್ನ ತಂಗಿ ಅವನ ಮನೆಗೆ ಹೋಗಿಬಂದಳು. ನಾನು ಮಾತನಾಡಿಸಿದರೂ ಮಾತನಾಡದೆ ಮುಖ ತಗ್ಗಿಸಿ ಓಡಿಬಂದಳು. ಅವನ ಮುಖ ಪೆಚ್ಚುಬಿದ್ದುಹೋಗಿತ್ತು. ಮೇಜಿನ ಮೇಲೆ ತಿಂಡಿಯ ಪೊಟ್ಟಣಗಳು. ತಿಂದಾಗ ನೆಲದಮೇಲೂ ಸ್ವಲ್ಪ ತಿಂಡಿ ಎರಚಾಡಿತ್ತು.

**ಶ್ರೀಕಂಠಯ್ಯ.**—ಇಷ್ಟು ಮಾತ್ರಕ್ಕೇ ಅವಳಮೇಲೆ ಹೇಗೆ ಸಂಶಯ ಪಡಲಿ? ಅವಳು ನಿರಪರಾಧಿನಿಯಾಗಿಯೇ ಇರಬಹುದು. ಅವಳನ್ನು ಹೇಗೆತಾನೆ ಮನೆಯಿಂದ ಹೊರಡಿಸಲಿ?

**ಶೇಷಗಿರಿರಾಯ.**—ಹಾಗಾದರೆ, ಕಾರಣವಿಲ್ಲದೆ ಹೇಳುತ್ತಿರುವವನು ನಾನೆಂತ ತಾನೆ, ನಿನ್ನ ಅಭಿಪ್ರಾಯ? (ಜೇಬಿನಿಂದ ಒಂದು ಡೈರಿಯನ್ನು ತೆಗೆದು ಅದರೊಳಗಿಟ್ಟಿದ್ದ ಕಾಗದವನ್ನು ಶ್ರೀಕಂಠಯ್ಯನ ಕೈಗೆ ಕೊಟ್ಟು) ಈ ಕಾಗದವನ್ನಾದರೂ ನೋಡಿ ನನ್ನ ಮಾತನ್ನು ನಂಬು. "ನನ್ನ ಮೋಹದ ಪ್ರಿಯಳಾದ ಶ್ರೀಮತಿ ಸುಂದರಿಯ ಸಮಕ್ಷಮಕ್ಕೆ" ಎಂತಲೇ ಬರೆದಿದ್ದಾನೆ, ಆ ನೀಚ. ಅವನು ಬರಹೇಳಿದ ಸಂಕೇತಕ್ಕೊಪ್ಪಿ ಅವಳೂ ಉತ್ತರ ಬರೆದಿದ್ದಾಳೆ.

**ಶ್ರೀಕಂಠಯ್ಯ.**—(ಕಾಗದವನ್ನೋದಿ) ಕುಲಕಳಂಕಿ! ಅವಳನ್ನು ಕಡಿದು ಹಾಕಿದರೂ ನನ್ನ ಕೋಪವು ತೀರುವಂತಿಲ್ಲ. ಅಯ್ಯೋ, ಹೇಗೆ ಸೈರಿಸಲಿ?

**ಶೇಷಗಿರಿರಾಯ.**—(ಅಳಿಯನ ಬೆನ್ನಿನ ಮೇಲೆ ಕೈಯಿಟ್ಟು) ಕಡಿಯುವುದು ಹೊಡೆಯುವುದು ಒಂದೂ ಬೇಡ. ಮನೆಯಿಂದ ಹೊರಡಿಸಿಬಿಡು. ನಡಿ, ಹೋಗೋಣ. (ಹೋಗುವರು.)

---

## ದೃಶ್ಯ ೬

[ಬೆಂಗಳೂರಿನ ಒಂದು ಭಾಗದಲ್ಲಿ ಶ್ರೀಕಂಠಯ್ಯನ ಮನೆ. ಸಾಮಾನುಗಳನ್ನು ನೋಡಿದರೇ ಬಡತನವು ತೋರಿಬರುವಂತಿರುವುದು. ಒಂದೆರಡು ಹಳೆಯ ಕುರ್ಚಿಗಳಿರುವುವು. ಗೋಡೆಯ ಮೇಲೊಂದು ಸರಸ್ವತಿಯ ಪಟವಿರುವುದು. ನೆಲದ ಮೇಲೊಂದು ಹರಕಲು ಜಮಖಾನವನ್ನು ಹಾಸಿರುವುದು. ಸುಂದರಿಯು ಅದರಮೇಲೆ ಕುಳಿತು, ಶೃತಿಗಾಗಿ ಹಾರ್ಮೋನಿಯಂ ಬಾರಿಸುತ್ತ ಇಬ್ಬರು ಹುಡುಗಿಯರಿಗೆ ಸಂಗೀತದ ಪಾಠವನ್ನು ಹೇಳುತ್ತಿರುವಳು.]

**ಸುಂದರಿ.**—ಲಿಲ್ಲಿ! ನಿಮ್ಮ ತಾಯಿತಂದೆಗಳು ನಿನ್ನ ಎಷ್ಟು ಮುದ್ದಿಸುತ್ತಾರೆ ನೋಡು. "ಲಿಲ್ಲಿ, ಲಿಲ್ಲಿ" ಎಂತ ಕೂಗ್ತಾರೆ. ನೀನು ಅವರ ಮುದ್ದಿಗೆ ಸರಿಯಾಗಿ ಮುದ್ದಾಗಿ ಸಂಗೀತ ಹೇಳಬೇಕಮ್ಮ. "ಶಿವದೀಕ್ಷಾ ...." ಅಂತ ಹೇಳಿ ಒಂದು ಗುಬ್ಬಚ್ಚಿ ಓಡಾಡುವ ಹಾಗೆ ಬಾಯಿ ಅಗಲಮಾಡ್ತೀಯಲ್ಲಮ್ಮ. ಸುಬ್ಬಲಕ್ಷ್ಮಿ ಹಾಗೆ ಹೇಳಬೇಕಮ್ಮ, ತಾಯಿ. ಕೋಪಿಸಿಕೋ ಬೇಡ. ನಾನೇ ನಿನ್ನ ತಪ್ಪು ತಿಳಿಸದೆಹೋದರೆ ಮತ್ತಾರಮ್ಮ ನಿನಗೆ ಹೇಳೋರು? ಸರಿಯಾಗಿ ಹೇಳಮ್ಮ.

**ಲಿಲ್ಲಿ.**—ನಾನು ಸರಿಯಾಗಿ ಹೇಳಬೇಕು ಅಂತಲೇ ಇರ್ತೀನಿ. ಆದರೆ ಅದೇನೋ ಆಗಿಹೋಗುತ್ತೆ. ತನ್ನಷ್ಟಕ್ಕೆ ತಾನೆ ಬಾಯಿ ದೊಡ್ಡದಾಗುತ್ತೆ. ನೀವಾದರೂ "ಗುಬ್ಬಚ್ಚಿ ಓಡಾಡುವ ಹಾಗೆ" ಅಂದಿರಿ. ನಮ್ಮಮ್ಮ "ಇದೇನೆ! ಗಾಡಿ ಓಡಾಡುವ ಹಾಗೆ ಬಾಯಿ ಅಗಲ ಮಾಡ್ತೀಯೆ" ಅಂತಾಳೆ. ಈ ಕೀರ್ತನೆ ಬೇಡ. ಬೇರೆ ಹೇಳಿಕೊಡಿ. (ಸುಬ್ಬಲಕ್ಷ್ಮಿ ನಗುವಳು.)

**ಸುಂದರಿ.**—ಸುಬ್ಬಲಕ್ಷ್ಮಿ! ಸಗಬಾರದಮ್ಮ. ನಿನ್ನಹಾಗೇ ಅವಳು. ಅವಳಹಾಗೇ ನೀನು. ಹೋಗಲಿ. ಇದು ಬೇಡವೇ ಬೇಡ. ಇನ್ನು ಸ್ವಲ್ಪ ದಿನ ಕಳೆದ ಮೇಲೆ ಹೇಳುವಿರಂತೆ. ಎಲ್ಲಿ, "ಶೃಂಗಾರಲಹರಿ" ಹೇಳೋಣ. ನಾನು ಮೊದಲು ಹೇಳ್ತೀನೆ. ಚೆನ್ನಾಗಿ ಕೇಳಿ. ("ಶೃಂಗಾರಲಹರಿ, ಶ್ರಿತಜನ ಶುಭಕರಿ" ಹಾಡುವಳು.)

**ಸುಬ್ಬಲಕ್ಷ್ಮಿ.**—(ಸಂತೋಷದಿಂದ) ಇದು ಬಹಳ ಚೆನ್ನಾಗಿದೆ. ನೀವು ಹೇಳಿದರೆ ಯಾವುದಾದರೂ ಚೆನ್ನಾಗಿಯೇ ಇರುತ್ತೆ. ಆದರೆ ನಾವು ಹೇಳಿದರೆ ಮಾತ್ರ....

**ಲಿಲ್ಲಿ.**—ಹೌದು, ನಾವು ಹೇಳಿದರೆ ಕೀರ್ತನೆ ಕೀಲುಗಳೇ ಮುರಿದು ಹೋಗಿ, ಕೀರ್ತನೆಗಳೇ ಗೋಳಾಡುವ ಹಾಗೆ ತೋರುತ್ತವೆ.

**ಸುಂದರಿ.**—ಹೀಗೆ ಯೋಚಿಸಲೇಬಾರದು. ಮನಸ್ಸಿಟ್ಟು ಕಲಿತರೆ ಸೊಗಸಾಗಿ ಹೇಳುತ್ತೀರಿ. ಸುಬ್ಬಲಕ್ಷ್ಮಿ! ನೀನು "ರಾಮುನೀ ಸಮಾನ ಮೆವರೋ" ಹೇಳಿ ಅವತ್ತು ಎಲ್ಲರನ್ನೂ ತಲೆದೂಗಿಸಿದೆಯಲ್ಲೆ. ಸೊಗಸಾಗಿ ಹೇಳುವಿರಂತೆ. ಸುಮ್ಮನಿರಿ. (ಮಕ್ಕಳ ಬೆನ್ನು ತಟ್ಟುವಳು.) ಎಲ್ಲಿ, "ಶೃಂಗಾರ ಲಹರಿ" ಹೇಳಿ. (ಹೇಳಿಕೊಡುತ್ತಿರುವಳು.)

**ಶೇಷಗಿರಿರಾಯ.**—(ಶ್ರೀಕಂಠಯ್ಯನೊಡನೆ ಪ್ರವೇಶಿಸಿ) ಸಾಕುಮಾಡಿ ನಿಮ್ಮ ಅವಾಂತರ. ಸುಂದರಿ! ನೀನು ಪೋಲಿಯಾದ್ದೇ ಸಾಕು.... (ಹುಡುಗಿಯರಿಬ್ಬರೂ ಬೆಚ್ಚಿ, ಅಳುತ್ತ ಹೊರಟುಹೋಗುವರು. ಸುಂದರಿಯು ಅಪ್ರತಿಭಳಾಗಿ ನಿಲ್ಲುವಳು.)

**ಸುಂದರಿ.**—ಮಾತನಾಡುವುದಕ್ಕೂ ರೀತಿಯಿಲ್ಲವೆ?

**ಶ್ರೀಕಂಠಯ್ಯ.**—ಮುಚ್ಚು ಬಾಯಿ. (ಕ್ರೋಧದಿಂದ ಕಂಪಿಸುತ್ತ) ಪಾಪಿ! ನಿನ್ನಿಂದ ನಾವು ಮಾನವಾಗಿ ಬಾಳುವುದಕ್ಕೂ ಇಲ್ಲವಾಯಿತು.

**ಸುಂದರಿ.**—ನನ್ನ ತಪ್ಪೇನೋ ಕಾಣೆನಲ್ಲಾ! ಕಂಠಿ! ಅವರು ಮಾಡಿದ ಅವಮಾನವೇ ಸಾಕು.

**ಶೇಷಗಿರಿರಾಯ.**—ಅವಮಾನವಂತೆ! ಇವಳಿಗೆ ಅವಮಾನ ಬೇರೆ. ಕಂಠೀ, ನಾನು ಮೊದಲಿನಿಂದಲೂ ಹೇಳಿ ಹೇಳಿ ಸಾಕಾದೆ. ಈ ಸಂಗೀತದವಳನ್ನ ಮನೆಯಲ್ಲಿಟ್ಟುಕೊಂಡಿರುವುದು ಸರಿಯಲ್ಲವೆಂತ. ನೀನು ಕೇಳಲಿಲ್ಲಪ್ಪ. ಈಗ ಅನುಭವಿಸು.

**ಸುಂದರಿ.**—ಅಬ್ಬ....ಎಲ್ಲಿ!....ನನ್ನ ಕಡೆ ತಿರುಗಿ ಮಾತನಾಡಿ. ನಿಮ್ಮ ಹುಡುಗಿಯನ್ನು ನಮ್ಮ ಅಣ್ಣನಿಗೆ ಕೊಡಬೇಕೆಂದು ಬಂದಾಗ ನೀವೇ ನನ್ನ ಹೊಗಳಿದ್ದಿರಿ. "ನಿಮ್ಮ ಕಲ್ಚರ್ ಎಷ್ಟು, ಏನು ಕಥೆ! ಸಭಾಕಂಪವಿಲ್ಲದೆ ಹಾಡಿ ಎಲ್ಲರನ್ನೂ ಬೆರಗುಮಾಡುವುದೆಂದರೆ ಸಾಮಾನ್ಯವೆ?" ಎಂದಿದ್ದಿರಿ. ಈಗ ಈ ಮಾತೆ? ನಮ್ಮ ದೇಶ ಹೀನಸ್ಥಿತಿಗೆ ಒರುತ್ತಿರುವುದೇ ಇಂಥ ಎರಡು ಮುಖದವರಿಂದ.

**ಶೇಷಗಿರಿರಾಯ.**—ನೀನು ಶುದ್ಧವಾಗಿದ್ದರೆ ಈಗಲೂ ಹಾಗೆನ್ನುತ್ತಿದ್ದೆ.

**ಸುಂದರಿ.**—ನಿಮ್ಮ ಹರಟೆಯನ್ನು ಸಾಕುಮಾಡಿ. ಕೊರಳಿಗೇ ಹೆಂಡದ ಗಡಿಗೆ ಕಟ್ಟಿಕೊಂಡು ಓಡಾಡಿದಹಾಗೆ ಹೀನಕಾರ್ಯ ಮಾಡಿದವರೆಲ್ಲಾ ಸುಖವಾಗಿದ್ದಾರೆ, ಈ ಸತ್ತ ಸಮಾಜದಲ್ಲಿ. ಬೆಂಕಿಯಂತೆ ಶುದ್ಧವಾಗಿದ್ದೂ ನನ್ನಂಥ ಅನಾಥೆಯರು ಸಂಕಟಪಟ್ಟು ಸಾಯಬೇಕಾಗಿದೆ. ಎಲುಬಿಲ್ಲದ ನಾಲಿಗೆ ಹೊರಳಿಸಿ ಹೊರಳಿಸಿ ಆಯಾಸಪಡಬೇಡಿ. ನಾಲಿಗೆ ಹದ್ದಿನಲ್ಲಿರಲಿ.

**ಶೇಷಗಿರಿರಾಯ.**—ಕಂಠೀ, ಈ ರಾಕ್ಷಸಿ ಕೈಯಲ್ಲಿ ನನಗೇಕೆ ಮಾತು? ನೀನುಂಟು ಅವಳುಂಟು. ಹೊರಗೆ ಗಾಡಿಯವನು ಕಾದಿದ್ದಾನೆ ....ನಿನ್ನೆದುರಿಗೇ ನನಗೂ ಪೂಜೆಯಾಯಿತಲ್ಲ.

**ಶ್ರೀಕಂಠಯ್ಯ.**—ನನಗಾಗಿ ಸೈರಿಸಿ.

**ಶೇಷಗಿರಿರಾಯ.**—ನಮ್ಮ ಹುಡುಗಿ ಈ ಮನೆಯಲ್ಲಿರುವುದು ಸರಿಯಿಲ್ಲ. ನಾನು ಎಲ್ಲ ನಿರ್ಧರಮಾಡಿಯೇ ಗಾಡಿಯವನನ್ನ ಇರುವಂತೆ ಹೇಳಿದೆ. (ಗಟ್ಟಿಯಾಗಿ ಕೂಗಿ) ವೆಂಕು, ಬಾರಮ್ಮ. ಕಂಠೀ! ನಿನ್ನ ತಂಗಿ

ಇಲ್ಲಿರುವವರೆಗೂ ವೆಂಕು ಈ ಮನೆಗೆ ಕಾಲಿಡುವುದಿಲ್ಲ. ನಿಮ್ಮ ನಿಮ್ಮ ಪಾಡು.

**ವೆಂಕಮ್ಮ.**—(ಪ್ರವೇಶಿಸಿ) ನನಗೆ ಕೈಕಾಲೇ ನಡುಕ. ಒಂದೂ ತಿಳಿಯಲಿಲ್ಲ. (ಗಂಡನ ಕಡೆಗೆ ನೋಡಿ) ಹೋಗಿಬರಲೆ? ಹೋಗಬೇಕೆ?

**ಶ್ರೀಕಂಠಯ್ಯ.**—ಹೋಗು.

**ವೆಂಕಮ್ಮ.**—ಸಾಮಾನುಗಳನ್ನ ತೆಗೆದುಕೊಂಡು ಬರ್ತೀನಿ. ಒಂದೂ ತಿಳಿಯಲಿಲ್ಲ. ದಿಗಿಲಿಗೆ ಎದೆ ಢವಢವನೆ ಹೊಡೆದುಕೊಳ್ಳುತ್ತಿದೆ.

**ಶೇಷಗಿರಿರಾಯ.**—ನೀನು ಇಲ್ಲಿ ಒಂದು ಕ್ಷಣವೂ ಇರಕೂಡದಮ್ಮ. ಅಯೋಗ್ಯ ಸ್ಥಳ. ಹೊರಡು. ದಿಗಿಲುಪಡಬೇಡಮ್ಮ. ಹೊಟ್ಟೆಯಲ್ಲಿರುವ ಮಗುವಿಗೆ ಅಪಾಯವಾದೀತು. ಧೈರ್ಯ ತಂದುಕೊ.

**ಸುಂದರಿ.**—ರಾಮಾ, ಹೆಂಗಸಿನ ಬಾಳು ಬಹು ಕಷ್ಟ. ನಾನು ಮಾಡಿರುವುದಾದರೂ ಏನು?

**ಶ್ರೀಕಂಠಯ್ಯ.**—(ರೋಷದಿಂದ ಸೆಡೆತು ನಿಂತು ಜೇಬಿನಿಂದ ಕಾಗದವನ್ನು ತೆಗೆದು ಸುಂದರಿಯ ಕೈಗೆ ಕೊಟ್ಟು) ನೀನು ಮಾಡಿರುವುದೇನೋ ನೋಡು.

**ಸುಂದರಿ.**—(ಕಾಗದವನ್ನು ಓದಿ ನೋಡದೆ) ಈ ಕಾಗದ ನಿಮಗೆ ಸಿಕ್ಕಿತೆ? ನಾನು ಆ ಹಾಳು ಮನೆಯಿಂದ ಹೊರಟಾಗ ಅಲ್ಲೇ ಎಲ್ಲಿಯೋ ಬಿದ್ದು ಹೋಗಿತ್ತು. ಗಂಡನು ಹೆಂಗಸಿಗೆ ಕಾಗದ ಬರೆಯುವುದೇ ತಪ್ಪೆ? ಗಂಡಸೂ ಹೆಂಗಸೂ ಮಾತನಾಡಿದರೇ ಅಪವಾದ ಬರಬೇಕೆ? ಅಯ್ಯೋ ಹಿಂದೂ ಸಮಾಜವೆ! ಅಯ್ಯೋ ಹತಭಾಗ್ಯ ಸಮಾಜವೆ! ಅಮ್ಮ ಮಾತ್ರ ನನಗೆ ಸಂಗೀತ ಹೇಳಿಕೊಡದೆ ಹೋಗಿದ್ದರೆ ಪರಾಧೀನದಲ್ಲಿ ನನ್ನ ಪಾಡು ನಾಯಿ ಪಾಡಾಗುತ್ತಿತ್ತು.

**ಶ್ರೀಕಂಠಯ್ಯ.**—ಸಾಕು ನಿನ್ನ ಕಪಟನಾಟಕದ ಅವಾಂತರ.

**ಸುಂದರಿ.**—ಕಂಠಿ, ನೀನೇ ನನ್ನ ಕತ್ತು ಕುಯ್ಯಬೇಡ. ಅಮ್ಮನ ಪಾದದಾಣೆ. ಸ್ವರ್ಗದಲ್ಲಿರುವ ನಿಮ್ಮ ಭಾವನವರ ಪಾದದಾಣೆ. ನಾನು

ಶುದ್ಧಳು. ನೀವು ರಾಜಮ್ಮನವರನ್ನು ನಿಜಸ್ಥಿತಿಯೇನೆಂದು ಕೇಳಿದ್ದರೆ ತಿಳಿಯುತ್ತಿತ್ತು.

**ಶ್ರೀಕಂಠಯ್ಯ.**—ರಾಜಮ್ಮನವರು ಹರಿಕಥೆಗೆ ಹೋಗಿದ್ದರು. ಆ ನೀಚ ಒಬ್ಬನೇ ಇದ್ದ. ಪಾಪಿ, ಬಾಯಿ ಮುಚ್ಚು. ಅವನ ಮೂಳೆಯನ್ನೇ ಮುರಿಯೋಣವೆಂದರೆ (ಶೇಷಗಿರಿರಾಯನ ಕಡೆಗೆ ಕೈ ತೋರಿಸಿ) ಇವರು ಆಣೆ ಯಿಡಿಸಿಕೊಂಡಿದ್ದಾರೆ. ಅವರು ರಾತ್ರಿಯೇ ವಿಚಾರಿಸಿಕೊಂಡು ಬಂದಿದ್ದಾರೆ. ನೋಡಿ ಬಂದಿದ್ದಾರೆ. ರಾಜಮ್ಮನವರು ಹರಿಕಥೆಗೆ ಹೋಗಿದ್ದರಂತೆ.

**ಸುಂದರಿ.**—ಸುಳ್ಳು; ರಾಜಮ್ಮನವರು ಹರಿಕಥೆಗೆ ಹೋಗಿರಲಿಲ್ಲ. ಅವರನ್ನೇ ಕೇಳು.

**ಶೇಷಗಿರಿರಾಯ.**—ಆ ನೀಚನೇ ಹೇಳಿದ. ಮನೆಯಲ್ಲಿ ಯಾರೂ ಇಲ್ಲದೆ ಒಬ್ಬಂಟಿಗನಾಗಿ ಕುಳಿತಿದ್ದ. ತಿಂಡಿ ಪೊಟ್ಟಣ ಬೇರೆ.

**ಸುಂದರಿ.**—ನನ್ನ ಮಾನವನ್ನುಳಿಸಿ ಕಾಪಾಡಿದವರೇ ರಾಜಮ್ಮ ನವರು. ಆ ಚಂಡಾಲ ನನಗೆ ಕಾಗದ ಬರೆದು ಕರೆಸಿಕೊಂಡ. ನಾನು ಹೋದೆ. ನನ್ನ ಬುದ್ಧಿ ಮೋಸಹೋಯಿತು. ಎಂದಿನಂತಿದ್ದ ಕುಂಭಕೋಣಂ ಅಂತ ಭಾವಿಸಿದೆ. ಮಾನ ಹೋಗುವ ಘಟ್ಟ ಬಂದಾಗ ಆ ಮಹಾತಾಯಿ ರಾಜಮ್ಮನವರು ನನ್ನ ಭಾಗದ ದೇವರಂತೆ ಒಂದು ಕಾಪಾಡಿದರು.

**ಶ್ರೀಕಂಠಯ್ಯ.**—ಸುಳ್ಳಿನಮೇಲೆ ಸುಳ್ಳು....ಇರಲಿ....ನೀನು ....ನೀನು....ಆ ನೀಚ ಮನೆಗೆ ಬಂದಾಗಲೆಲ್ಲ ನುಸುಳಿಹೋಗಿ ಅವನೊಡನೆ ಏಕಾಂತವಾಗಿ ಮಾತನಾಡುತ್ತಿದ್ದುದೇಕೆ? ನನ್ನೆದುರಿಗೇ ದೂರಕ್ಕೆ ಅವನನ್ನು ಕರೆದೊಯ್ದು ಮಾತನಾಡುತ್ತಿದ್ದುದೇಕೆ? ಸುಂದರಿ! ರಾತ್ರಿ ಮಾತ್ರವೇ ನಾಟಕದಲ್ಲಿ ಬಣ್ಣ ಹಾಕಿಕೊಂಡು ಕುಣಿಯುವವರನ್ನು ನಾನು ನೋಡಿದ್ದೆ. ನೀನು ಹಗಲೂ ನಾಟಕವಾಡುವವಳು.

**ಸುಂದರಿ.**—ನಿನ್ನ ಮದುವೆ ಸಂಬಂಧದಲ್ಲಿ ಆ ನೀಚ ಸಾಲ ಕೊಡಿಸಿದ್ದ. ನಿನಗೆ ತಿಳಿದರೆ ನೀನು ನೊಂದುಕೊಳ್ಳುವೆಯೆಂತ ಭಾವಿಸಿ ಹಾಗೆ ಮಾಡುತ್ತಿದ್ದೆ. ಸಾಲಕ್ಕೆ ಮೊದಲು, ಸಾಲಪಡೆಯಲು ಗುಸು

ಗುಸು. ಸಾಲಪಡೆದ ಮೇಲೆ ತೀರಿಸಲಾರದೆ ಬಡ್ಡಿಗೆ ವಾಯಿದೆ ಪಡೆಯಲು ಗುಸುಗುಸು. ಏನು ಮಾಡಲಿ, ಅಣ್ಣಾ ನನ್ನ ಪ್ರೀತಿಸಿದ್ದೇ ತಪ್ಪಾಯಿತು.

**ಶೇಷಗಿರಿರಾಯ.**—ಬಾ, ವೆಂಕು ಹೊರಡೋಣ. ಇದೇನೂ ಪ್ರಯೋಜನವಿಲ್ಲಪ್ಪ ಕಂಠಿ. ಸುಳ್ಳಿನ ಸರಪಣಿ.

**ಸುಂದರಿ.**—ನಾನು ಸುಳ್ಳು ಹೇಳಿಲ್ಲ. ರಾಜಮ್ಮನವರನ್ನು ಕೇಳಿ.

**ಶೇಷಗಿರಿರಾಯ.**—ನಿನ್ನ ಮುಖಕ್ಕೆ ಮಂಗಳಾರತಿ. ನಾವು ಪಂಚಾಯಿತಿ ಮಾಡಿ, ಹಾದಿರಂಪ ಬೀದಿರಂಪ ಮಾಡಿಕೊಂಡು ಮಾನ ಕಳೆದುಕೊಳ್ಳೋಣವೆ? ಈಗ ನಡೆದಷ್ಟು ಹಗರಣವೇ ಸಾಕಾಗಿದೆ. ಕಂಠಿ, ರಾಜಮ್ಮನವರು ಇದ್ದದ್ದು ಸುಳ್ಳು. ಆಗ ಅವರು ಅಲ್ಲಿರಲೇ ಇಲ್ಲ. ನಂಬು: ಈ ಸುದ್ದಿಯನ್ನೇ ಯಾರಲ್ಲೂ ಎತ್ತಬೇಡ. ಮಾನ ಹೋದೀತು. ನನ್ನ ಮಾತು ಕೇಳಿ ಸುಮ್ಮನಿರು. ಎಷ್ಟು ಸುಳ್ಳು ಹೇಳಿದರೂ ನಿಜವನ್ನು ಮುಚ್ಚಲಾದೀತೆ!

**ಶ್ರೀಕಂಠಯ್ಯ.**—ಸುಂದರಿ! ನನ್ನ ಹೊಟ್ಟೆ ಉರಿಸಬೇಡ. ಸುಳ್ಳಿನ ಮೇಲೆ ಸುಳ್ಳು ಬೊಗಳಬೇಡ. (ಕಾತರ ಸ್ವರದಿಂದ) ಅಯ್ಯೋ! ಆ ನೀಚ "ನನ್ನ ಮೋಹದ ಪ್ರಿಯೆಯಾದ ಶ್ರೀಮತಿ ಸುಂದರಿಯ ಸಮಕ್ಷಮಕ್ಕೆ" ಎಂತ ಬರೆದಿದ್ದಾನೆ. ನಿನ್ನ ಬರಹೇಳಿದ್ದಾನೆ. ನೀನೇ ಬರುವುದಾಗಿ ಒಪ್ಪಿ ಉತ್ತರ ಬರೆದಿದ್ದೀಯೆ. ಪಾಪಿ! ನೀನು ಮೊದಲೇ ಸಾಯಬಾರದಾಗಿತ್ತೆ?

**ಸುಂದರಿ.**—ಸತ್ತಿದ್ದರೆ ಚೆನ್ನಾಗಿಯೇ ಇತ್ತು. ಆ ಭಾಗ್ಯವೆಲ್ಲಿ? ನೀನು ಹೇಳಿದಂತೆ ಅವನು ಬರೆದಿರಲಿಲ್ಲ. ಬರೆದಿದ್ದರೆ, ನಿನಗೇ ಕಾಗದ ತೋರಿಸಿ ಅವನಿಗೆ ತಕ್ಕ ಶಾಸ್ತಿ ಮಾಡಿಸುತ್ತಿದ್ದೆ. ಸಾಲದ ತಗಾದೆ ಮಾತಿಗಾಗಿ ಬರಹೇಳಿರಬಹುದೆಂದು ತಿಳಿದು ಅಲ್ಲಿಗೆ ಹೋಗಿ ಮಣ್ಣು ತಿಂದೆ.

**ಶ್ರೀಕಂಠಯ್ಯ.**—(ದುಃಖಾವೇಗದ ದೈನ್ಯ ಸ್ವರದಿಂದ) ಕಾಗದದಲ್ಲಿ ಬರೆದಿದೆ. ಓದಿ ನೋಡು. ನೋಡು, ನಿನ್ನ ಧರ್ಮಕ್ಕೆ.

**ಸುಂದರಿ.**—(ಓದಿನೋಡಿ ಅಪ್ರತಿಭಳಾಗಿ) ಅಯ್ಯೋ ಇದೇನು ಈ ವಿಪರೀತ! ರಾಜಮ್ಮನವರು ನನ್ನ ಕೈಗೆ ಕಾಗದ ಕೊಟ್ಟಮೇಲೆ ನಾನು

ಅದನ್ನು ಓದಲಿಲ್ಲ. (ಕಾಗದವನ್ನು ಬಿರುಗಣ್ಣಿನಿಂದ ದೃಷ್ಟಿಸಿ ನೋಡಿ) ಅಣ್ಣಾ, ಕಂಠೀ, ವಿಧಿಯೂ ನನಗೆ ಮೋಸಮಾಡಿದೆ. ನಾನು ಉತ್ತರ ಬರೆದಾಗ ಈ ಮಾತುಗಳಿರಲಿಲ್ಲ. ಖಂಡಿತ ಇರಲಿಲ್ಲ. ಅಯ್ಯೋ, ಅನಾಥಳಾದ ವಿಧವೆಯ ಪಾಲಿಗೆ ದೇವರೂ ನಿರ್ದಯನು! (ಕಾಗದವನ್ನು ನೆಲದಮೇಲಕ್ಕೆಸೆದು ಅಳುವಳು.)

**ಶ್ರೀಕಂಠಯ್ಯ.**—(ರೋಷದಿಂದಲೂ, ದುಃಖದಿಂದಲೂ ತಲೆ ಚಚ್ಚಿಕೊಂಡು) ಪಾಪಿಷ್ಠೆ! ಎಲ್ಲಕ್ಕೂ ಉತ್ತರ ಹೇಳುತ್ತೀಯೆ! ನಿನ್ನ ಈ ಹಾಳು ಬುದ್ಧಿಯನ್ನೂ, ಈ ಬೆಡಗು ಜ್ಞಾನವನ್ನೂ ಒಳ್ಳೆಯ ಕೆಲಸಕ್ಕೆ ಉಪಯೋಗಿಸ ಬಾರದಾಗಿತ್ತೆ? ನೀನು ಈ ಮನೆಯಿಂದ ತೊಲಗುವವರೆಗೂ ನಾನು ಇಲ್ಲಿಗೆ ಬರುವುದಿಲ್ಲ. ಅಯ್ಯೋ!

**ಶೇಷಗಿರಿರಾಯ.**—ಪೇಚಾಡಬೇಡಯ್ಯ! ನಡಿ ಹೋಗೋಣ. ವೆಂಕು! ಹೊರಡು. ಕಂಠಿ! ಆ ಕಾಗದವನ್ನು ತೆಗೆದುಕೊ. (ಅವನು ತೆಗೆದು ಕೊಳ್ಳುವನು.) ನಡಿ.

**ವೆಂಕು.**—ಅತ್ತಿಗೆಮ್ಮ ಒಬ್ಬರೇ ಇರಬೇಕೆ? (ತಂದೆಯೂ, ಗಂಡನೂ ಹೊರಡುವಂತೆ ಸಂಜ್ಞೆಮಾಡುವರು.) ಒಟ್ಟೆಗಳನ್ನಾದರೂ....

**ಶೇಷಗಿರಿರಾಯ.**—ಎಲ್ಲಾ ಅಲ್ಲೇ ಆಗುತ್ತೆ. ನಡಿಯಮ್ಮ, ಅಲ್ಲಿಲ್ಲವೆ!

(ಸುಂದರಿಯೊಬ್ಬಳು ಹೊರತು ಉಳಿದವರೆಲ್ಲ ಹೊರಟುಹೋಗುವರು.)

**ಸುಂದರಿ.**—(ಸ್ವಲ್ಪಹೊತ್ತು ಅಳುತ್ತಿದ್ದು ಹಾಗೆ ಸಮಾಧಾನ ಮಾಡಿಕೊಂಡು) ಅಯ್ಯೋ ನನ್ನ ಕಣ್ಣೇ! ನನಗೇ ಮೋಸಮಾಡಿದೆಯಾ? ಆ ನೀಚ ಹೀಗೆ ಬರೆದಿದ್ದೂ ನಾನು ನೋಡಲಿಲ್ಲವೆ? (ನಿಟ್ಟುಸಿರುಬಿಟ್ಟು) ದೇವರಿಗೂ ಕಣ್ಣಿಲ್ಲವೋ ಏನೋ! ಅಯ್ಯೋ, ಎಂಥ ಅಪವಾದಕ್ಕೆ ಗುರಿಯಾದೆ! ಭಾರತ ಭೂಮಿಯಂತೆ. ಋಷಿಗಳು ಮಾಡಿದ ಶಾಸ್ತ್ರಗಳಂತೆ. ಅವರ ಉದಾರ ಭಾವ ಅವರ ಕಾಲಕ್ಕೇ ಹೋಯಿತು. ನಮ್ಮ ದೇಶದಲ್ಲಿ ಹೆಣ್ಣಾಗಿ ಹುಟ್ಟಲೇ ಬಾರದು. ಹುಟ್ಟಿದರೂ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿ ವಿಧವೆಯಾಗ ಬಾರದು. ಇತರರ ಸುಖವನ್ನೂ ಸಂತೋಷವನ್ನೂ ನೋಡುತ್ತಿದ್ದೂ

ಜೀವವನ್ನು ಬಿಗಿಹಿಡಿದುಕೊಂಡು ದುಃಖವನ್ನು ನುಂಗಿ ಪತಿಯನ್ನು ಧ್ಯಾನಿಸುತ್ತಿರುವ ವಿಧವೆಯ ತ್ಯಾಗದ ಮರ್ಮವು ಎಲ್ಲರಿಗೂ ತಿಳಿದೀತೆ? (ಅಳುತ್ತ) ಕಂಠೀ, ನನಗೆ ನೀನೊಬ್ಬನೇ ದಿಕ್ಕೆಂದಿದ್ದೆ. ನಿನ್ನ ಮಗುವನ್ನು ನನ್ನ ಮಗುವಿಗಿಂತಲೂ ಹೆಚ್ಚಾಗಿ ಪ್ರೀತಿಸಬೇಕೆಂದಿದ್ದೆ. ನೀನೂ ನನ್ನ ಭಾಗಕ್ಕೆ ಹಗೆಯಾದೆಯಾ?....(ಸ್ವಲ್ಪ ಸಮಾಧಾನಮಾಡಿಕೊಂಡು) ಅಯ್ಯೋ? ಎಷ್ಟೆಷ್ಟು ಪಾಪಮಾಡಿದ ಮುಳಿಯರೆಲ್ಲ ಸುಖವಾಗಿದ್ದಾರೆ. ನನಗೆ ಮಾತ್ರ ಬರ ಬಾರದ್ದು ಬಂದಿದೆ. ಅನಾಥೆಯರಾದ ವಿಧವೆಯರಲ್ಲಿ ದೇವರಿಗೂ ದಯೆ ಯಿಲ್ಲ. (ಅಳುತ್ತ) ನನ್ನ ವಸ್ತುವೊಂದಿದ್ದರೆ,....ಅಮ್ಮಾ, ನಿನ್ನ ಹಾಗೆಯೇ ನಾನೂ ಶುದ್ಧವಾಗಿದ್ದೀನಿ....ನನ್ನ ಅಪಮಾನ ನೋಡಮ್ಮಾ.... ಸಾವೇ ನನಗೆ ಶರಣು....ಸಾಯುವುದು ಎಷ್ಟು ಕಷ್ಟ! ದೇವರೇ, ಈಗ ಸಾಯಲೇ ಬೇಕಲ್ಲಪ್ಪ. ಹೇಗೆ ಸಾಯಲಿ ಭಗವಂತ! ಹೇಗೆ ಸಾಯಲಿ?

(ಅಳುವಳು. ತೆರೆಯು ಬೀಳುವುದು.)

---

## ಮೂರನೆಯ ಅಂಕ

### ದೃಶ್ಯ ೧

[ಬೆಂಗಳೂರು ನಗರದಲ್ಲಿ ಶ್ರೀಕಂಠಯ್ಯನ ಮನೆಗೆ ಹೋಗುವ ದಾರಿ. ಶೇಷಗಿರಿ ರಾಯನು ಅಳಿಯನನ್ನು ನೋಡಲು ಹೋಗುತ್ತಿರುವನು. ಡಾಕ್ಟರ್ ನಾಗೇಶ್ವರ ಐಯರ್ ಬೈಸಿಕಲ್ ಹಿಡಿದುಕೊಂಡು ಎದುರಿಗೆ ಬರುತ್ತಿರುವನು.]

**ಶೇಷಗಿರಿರಾಯ.**—ಏನು ಡಾಕ್ಟರ್ ನಾಗೇಶ್ವರಯ್ಯರೇ, ಗುಡ್ ಮಾರ್ನಿಂಗ್. ಏನು ಹೀಗೆ ಸವಾರಿ?

**ನಾಗೇಶ್ವರ ಐಯರ್.**—ಗುಡ್ ಮಾರ್ನಿಂಗ್. ಇನ್ನೇನು, ಗೊತ್ತೇ ಇದೆ; ಆಸ್ಪತ್ರೆಗೆ ಹೊರಟೆ. ಇದೇನು ತಾವು ಇಷ್ಟು ಜಾಗ್ರತೆ ಹೊರಟಿದ್ದೀರಿ. . . . ನಿನ್ನೆ ನಿಮ್ಮ ಅಳಿಯಂದಿರನ್ನ ನೋಡಿದ್ದಿರೇನು?

**ಶೇಷಗಿರಿರಾಯ.**—ಆರೋಗ್ಯವಾಗಿದ್ದಾನೆ ತಾನೆ?

**ನಾಗೇಶ್ವರ ಐಯರ್.**—ಆರೋಗ್ಯವಾಗಿದ್ದಾರೆ. ಆದರೆ ದುಃಖ ದಲ್ಲಿರುವ ಮನುಷ್ಯ. ನೋಡಿದ್ದಿರಾ ಅಂತ ಕೇಳಿದೆ, ಅಷ್ಟೆ.

**ಶೇಷಗಿರಿರಾಯ.**—(ಆತುರದಿಂದ) ಹಾಗೆಂದರೆ? . . . . ದುಃಖವೇಕೆ?

**ನಾಗೇಶ್ವರ ಐಯರ್.**—ಅವರು ದುಡುಕಿ ತಮ್ಮ ತಂಗಿ ಮೇಲೆ ಅಪವಾದ ಹೇರಿ, ಆಕೆ ಊರು ಬಿಟ್ಟು ಓಡಿಹೋಗುವ ಹಾಗೆ ಮಾಡಿದ್ದಕ್ಕಾಗಿ.

**ಶೇಷಗಿರಿರಾಯ.**—ಅದೆಲ್ಲಾ ಹಳೆಯ ಕತೆ. ಆರೇಳು ವರುಷಗಳ ಹಿಂದಿನ ಮಾತು. ಅವಳೂ ತಪ್ಪು ಮಾಡಿದ್ದಳು. ಮಾನ ಹೋದೀತೆಂತ ನಾನಾಗಲಿ, ಅವನಾಗಲಿ, ಆ ಸುದ್ದಿಯೇ ಎತ್ತಿರಲಿಲ್ಲ. ಇಷ್ಟಕ್ಕೂ ಅವಳು ಎಲ್ಲಿ ಹೋದಳೆಂಬುದೇ ತಿಳಿದಿರಲಿಲ್ಲ. ನನ್ನ ಅಳಿಯ ದುಡುಕಿದ್ದೇನು?

**ನಾಗೇಶ್ವರ ಐಯರ್.**—ಶ್ರೀನಿವಾಸಯ್ಯನೆಂಬಾತ ನಿನ್ನೆ ಆಸ್ಪತ್ರೆಗೆ ಬಂದಿದ್ದ. ಅವನಿಗೆ ಪ್ಲೇಗು. ತುಮಕೂರಿನಲ್ಲಿ ತಗಲಿರಬೇಕು. ನಿಮ್ಮ ಅಳಿಯನ್ನ ಕರೆಸಿದ್ದೆವು.

**ಶೇಷಗಿರಿರಾಯ.**—ಯಾರು ಆ ಕುಂಭಕೋಣಂ ತಾನೆ? ನನ್ನ ಅಳಿಯನ್ನ ಆ ನೀಚನ ಬಳಿಗೇಕೆ ಕರೆಯಿಸಿದಿರಿ?

**ನಾಗೇಶ್ವರ ಐಯರ್.**—ಏನು ಅವಿವೇಕ ಸ್ವಾಮಿ, ಜನಗಳದು! ಅವನಿಗೆ ಕುಂಭಕೋಣಂ ಎಂತ ಹೆಸರಿಟ್ಟಿದ್ದಾರೆ. ಕುಂಭಕೋಣದವರೆಲ್ಲಾ ಮೋಸಗಾರರೆ, ಹೇಳಿ. ಮೈಸೂರು ದೇಶದವನಿಗೆ ಹಾಗೇಕೆ ಹೆಸರಿಡಬೇಕು?

**ಶೇಷಗಿರಿರಾಯ.**—ಅದಿರಲಿ. ನನ್ನ ಅಳಿಯ ನಿಮ್ಮಲ್ಲಿಗೇಕೆ ಬರಬೇಕಾಯಿತು?

**ನಾಗೇಶ್ವರ ಐಯರ್.**—(ನಕ್ಕು) ನಿಮ್ಮ ಕುಂಭಕೋಣಂ ಸಾಯುವುದಾಗಿ ಹೆದರಿ ನಿಮ್ಮ ಅಳಿಯನ ಕೈಯಲ್ಲಿ ಮಾತನಾಡಬೇಕೆಂದ; ಕರೆಸಿದೆವು. ಕುಂಭಕೋಣಂ ಅತ್ತು ಅತ್ತು ಸಾಕಾದ. ಆ ಹುಡುಗಿ ಸುಂದರಿ ಪರಿಶುದ್ಧಳೆಂದೂ, ತಾನೇ ಪಾಪಿಯೆಂದೂ, ತಪ್ಪು ಒಪ್ಪಿಕೊಳ್ಳದೆ ಸಾಯಲು ಮನಸ್ಸಿಲ್ಲವೆಂದೂ, ಹೇಳಿಕೊಂಡು ಗೋಳಾಡಿದ. ಆಕೆ ಬಹಳ ಒಳ್ಳೆಯವಳು ನೋಡಿ. ಅಣ್ಣನ ಹೆಂಡತಿಗೆ–ನಿಮ್ಮ ಮಗಳಿಗೆ–ಒಡವೆ ಮಾಡಿಸಬೇಕೆಂತ ಕುಂಭಕೋಣಂ ಸಹಾಯದಿಂದ ಮಾರ್ವಾಡಿ ಸಾಹುಕಾರನ ಹತ್ತಿರ ಅಣ್ಣ ಕಾಣದ ಹಾಗೆ ಸಾಲಮಾಡಿದ್ದಳಂತೆ. ಈ ನೀಚ ಕುಂಭಕೋಣಂ ಅವಳ ಮೇಲೆ ಕಣ್ಣು ಹಾಕಿ, ಅದೇ ನೆವವನ್ನುಪಯೋಗಿಸಿಕೊಂಡು ಅವಳಿಗೆ ತಗಾದೆ ಕೊಟ್ಟು ಗೋಳಾಡಿಸಿದನಂತೆ. ಸಾಲದ ತಾಪತ್ರಯ ಅಣ್ಣನಿಗೆ ತಿಳಿದರೆ ದಂಪತಿಗಳ ಹೊಸ ಸಂಸಾರದ ಸುಖಕ್ಕೆ ತೊಂದರೆಯಾದೀತೆಂತ, ಅವಳು ಅಣ್ಣ ಕಾಣದ ಹಾಗೆ ಕುಂಭಕೋಣಂ ಕೈಯಲ್ಲಿ ಸಮಾಧಾನ ಹೇಳಿ ಹೇಳಿ ಸಾಲದ ಮಾತನಾಡುತ್ತಿದ್ದಳಂತೆ. ಎಂಥ ಪ್ರೀತಿ! ಅಣ್ಣನಲ್ಲಿಯೂ ಅತ್ತಿಗೆಯಲ್ಲಿಯೂ ಎಷ್ಟು ಪ್ರೇಮ!

**ಶೇಷಗಿರಿರಾಯ.**—ಆಮೇಲೆ, ಆಮೇಲೆ? ಹೀಗೇ ಈ ಕಥೆ!

**ನಾಗೇಶ್ವರ ಐಯರ್.**—ಯಾವುದೋ ಒಂದು ಕಾಗದವಂತಲ್ಲ. ಆ ನೀಚ ಕುಂಭಕೋಣಂ ಆಕೆಗೊಂದು ಕಾಗದದ ಬರೆದನಂತೆ. ತಮ್ಮ ಮನೆಗೆ ಒಬ್ಬಳೇ ಬರಬೇಕೆಂತ. ಆಕೆ ಉತ್ತರ ಬರೆದಳಂತೆ. ಅವಳಿಗೊಂದೂ ತಿಳಿದಿರಲಿಲ್ಲವಂತೆ. ಪಾಪ!

**ಶೇಷಗಿರಿರಾಯ.**—ಇದರಲ್ಲೇನೋ ಮೋಸವಿರಬೇಕು. "ನನ್ನ ಮೋಹದ ಪ್ರಿಯೆಯಾದ ಶ್ರೀಮತಿ ಸುಂದರಿಗೆ" ಅಂತಿದೆ ಆ ಕಾಗದದಲ್ಲಿ. ಅವಳಿಗೊಂದೂ ತಿಳಿದಿರಲಿಲ್ಲವೆಂದರೇನು, ಹೇಳಿ.

**ನಾಗೇಶ್ವರ ಐಯರ್.**—ಪೂರ್ತಿ ಕೇಳಿ ಸಾರ್. ಮೊದಲು "ಶ್ರೀಮತಿ ಸುಂದರಿಗೆ" ಎಂದು ಮಾತ್ರವೇ ಬರೆದು ಕಳುಹಿಸಿದ್ದನಂತೆ. ಕೃತ್ರಿಮ ವಿಲ್ಲದಿಯದ ಆ innocent girl ಸುಂದರಿ, ತಾನು ಬರುವುದಾಗಿ ಉತ್ತರ ಬರೆದು ಕಳುಹಿಸಿದಮೇಲೆ, ಅವನು ತನ್ನ ಮನಸ್ಸಿನ ಚಪಲ ಸಹಿಸಲಾರದೆ "ನನ್ನ ಮೋಹದ ಪ್ರಿಯೆಯಾದ" ಎಂತ ಬರೆದು ತನ್ನ ಚಪಲ ತೀರಿಸಿ ಕೊಂಡು ಆ ಕಾಗದವನ್ನು ಮೇಜಿನಲ್ಲಿಟ್ಟುಕೊಂಡನಂತೆ. ಆತನ ಹೆಂಡತಿ ಆ ಕಾಗದ ನೋಡಿದರಂತೆ. ಆಕೆ ಅದನ್ನ ತೆಗೆದಿಟ್ಟುಕೊಂಡರಂತೆ.

**ಶೇಷಗಿರಿರಾಯ.**—ಅಯ್ಯೋ ದೇವರೆ! ಹೀಗೆ ನಡೆಯಿತೆ? ಆಮೇಲೆ?

**ನಾಗೇಶ್ವರ ಐಯರ್.**—ಆಮೇಲೇನು? ಹರಿಕಥೆಗೆ ಹೋಗಬೇಕೆಂತ ಆತನೇ ಆಕೆಯನ್ನು ಬಲವಂತಪಡಿಸುತ್ತಿದ್ದನಂತೆ. ಆಕೆ ಹಿತ್ತಿಲು ಬಾಗಿಲು ಚಿಲಕ ತೆಗೆದು ಹಾಕಿದ್ದರಂತೆ. ಹರಿಕಥೆಗೆ ಹೆಂಗಸರ ಜೊತೆಯಲ್ಲಿ ಹೋಗು ವುದಾಗಿ ಹೇಳಿ ಹೊರಟರು. ಆತ ಬೀಗ ಹಾಕಿಕೊಂಡು ತಿಂಡಿ ಪೊಟ್ಟಣ ತರೋದಕ್ಕೆ ಹೋದ. ಆಕೆ ಹಿತ್ತಿಲು ಬಾಗಿಲಿನಿಂದ ಬಂದು ಗಂಡನಿಗೆ ಗೋಚರವಲ್ಲದಂತೆ ಮನೆಯಲ್ಲಿದ್ದರು. ಸುಂದರಮ್ಮ ಬಂದಮೇಲೆ ಆತ ಹುಚ್ಚು ಮಾತನಾಡಿದ. ಸುಂದರಮ್ಮ ಚೆನ್ನಾಗಿ ಬೈದಳಂತೆ. ಆಕೆ ಸುಂದರಮ್ಮನ ಮಾನ ಉಳಿಸಿದರು. ಆ ಕಾಗದವನ್ನೂ ಆಕೆ ಅವಳಿಗೆ ಕೊಟ್ಟರು. ಹೀಗೆ ನಡೆಯಿತಂತೆ.

**ಶೇಷಗಿರಿರಾಯ.**—ಆ ದಿನ ರಾತ್ರಿ ಆ ನೀಚ ತನ್ನ ಹೆಂಡತಿ ಹರಿಕಥೆಗೆ ಹೋಗಿದ್ದಾಳೆಂತ ಹೇಳಿದನಲ್ಲಾ!

**ನಾಗೇಶ್ವರ ಐಯರ್.**—ಇಲ್ಲವಂತೆ. ನೆರೆಮನೆ ಹೆಂಗಸು ಬಂದ ರಂತೆ. ಆಕೆ ಆ ನೆರೆಮನೆಯ ಹೆಂಗಸಿನೊಡನೆ ಮಾತನಾಡುವುದಕ್ಕಾಗಿ ಹಿತ್ತಿಲಿನಲ್ಲಿದ್ದರಂತೆ. ಅಷ್ಟರಲ್ಲಿ ನೀವು ಅಲ್ಲಿಗೆ ಹೋಗಿಬಂದಿರಿ. ಸುಂದರಮ್ಮ ನಿಜವಾಗಿಯೂ ಶುದ್ಧಳು. ಎಂಥ ಸರಳವಾದ ಎಂಥ ಶುದ್ಧವಾದ ಹೃದಯ

ಆಕೆಯದು! ಆಕೆ ಸತ್ತೇಹೋದಳೋ ಏನೊ! ನಿಮ್ಮ ಅಳಿಯ ಅತ್ತು ಗೋಳಾಡಿದರು. ಕುಂಭಕೋಣಂ ಕ್ಷಮೆ ಬೇಡಿ ಅತ್ತ. ಅವನು ಬದುಕುವುದು ಕಷ್ಟ. ನಾವು ನಾಹಸಪಡುತ್ತೇವೆ. ಹೋಗ್ತೇನೆ, ಗುಡ್ ಮಾರ್ನಿಂಗ್.

**ಶೇಷಗಿರಿರಾಯ.**—ನಾನೂ ನನ್ನ ಅಳಿಯನಿಗೆ ಸಮಾಧಾನ ಹೇಳ್ತೇನೆ. ಗುಡ್ ಮಾರ್ನಿಂಗ್.

(ಇಬ್ಬರೂ ಹೋಗುವರು.)

---

## ದೃಶ್ಯ ೨

[ಶ್ರೀಕಂಠಯ್ಯನ ಮನೆಯ ಬೀದಿಯ ನಡುವೆ. ಎರಡು ಚಿತ್ತದ ಕುರ್ಚಿಗಳಿರುವುವು. ಒಂದರಲ್ಲಿ ಶ್ರೀಕಂಠಯ್ಯನು ದುಃಖಾಕ್ರಾಂತನಾಗಿ ಕುಳಿತಿರುವನು. ಅವನ ಬಳಿಯಲ್ಲಿ ವೆಂಕಮ್ಮನು ಮತ್ತೊಂದರಲ್ಲಿ ಕುಳಿತಿರುವಳು.]

**ಶ್ರೀಕಂಠಯ್ಯ.**—ಅಯ್ಯೋ, ಅನ್ಯಾಯವಾಯಿತು. ನಾನು ಸತ್ತ ಮೇಲೆ ಅಮ್ಮನನ್ನು ಕಂಡರೆ ಏನೆನ್ನಲಿ? ಏನೆನ್ನಲಿ ಭಗವಂತ?

**ವೆಂಕಮ್ಮ.**—ನನ್ನ ತಿಂಪುಕೊಂಡ ಆಣೆ. ಕೆಟ್ಟಮಾತನಾಡಬೇಡಿ.

**ಶ್ರೀಕಂಠಯ್ಯ.**—ಏನು ಮಾತನಾಡಿ ಏನು ಫಲ? (ಕಾತರ ಸ್ವರದಿಂದ) ಸುಂದರಿ, ಸುಂದರಿ! ಎಲ್ಲಿ ಹೋಗಿಬಿಟ್ಟೆಯೇ ತಾಯಿ! ನಿನಗೆ ನಾನೇ ಮೃತ್ಯುವಾದೆ. ಮಾರ್ವಾಡಿಯ ಸಾಲ ತೀರಿಸುವಾಗ ನಾನು ನಿರಪರಾಧಿನಿಯಾದ ನಿನ್ನನ್ನೆಷ್ಟು ಬೈದೆ?

**ವೆಂಕಮ್ಮ.**—ನಮ್ಮ ತಂದೆಯೂ, ನೀವೂ ಇಬ್ಬರೂ ಓದಿದವರು. ಇಬ್ಬರೂ ದುಡುಕಿದಿರಿ. ಆ ದಿನ ನನಗೆ ಕೈಕಾಲು ನಡುಕಬಂತು. ಅತ್ತಿಗೆಮ್ಮ ಒಬ್ಬರನ್ನೇ ಬಿಟ್ಟು ಹೋಗಬಾರದಾಗಿತ್ತು. ನನಗೆ ಮನಸ್ಸಿರಲಿಲ್ಲ. "ಹೋಗಿಬರಲೆ? ಹೋಗಬೇಕೆ?" ಎಂದು ಕೂಡ ಕೇಳಿದೆ. ಅತ್ತಿಗೆಮ್ಮ ಒಬ್ಬರೇ ಇರಬೇಕಾಗುವುದೆಂದು ಕೂಡ ಸೂಚಿಸಿದೆ. ನೀವು ನನಗೆ ದಿಕ್ಕು ತೋರದಂತೆ ಮಾಡಿದಿರಿ.

**ಶ್ರೀಕಂಠಯ್ಯ.**—ದುಡುಕಿದೆವು, ವೆಂಕೂ, ದುಡುಕಿದೆವು. ವಿವೇಕವಿಲ್ಲದ ಓದಿಗೆ ಬೆಂಕಿ ಹಾಕಿದರು. ಈ ಹಾಳು ಓದು, ಓದೇ ಹೇಳು. ತಲೆಗೆ ವಿಷಯಗಳನ್ನು ತುಂಬಿ ಹೃದಯದಲ್ಲಿ ಸ್ವಪ್ರತಿಷ್ಠೆ ತುಂಬುವ ಓದು. ಹೃದಯವನ್ನು ಮರುಭೂಮಿ ಮಾಡುವ ಓದು.

**ವೆಂಕಮ್ಮ.**—ನಿಮ್ಮದೆಲ್ಲಾ ಅತಿರೇಕವೇ! ಓದಿದವರೆಲ್ಲರೂ ಹೀಗೆಯೇ ಮಾಡುತ್ತಾರೆಯೆ? ನಮ್ಮ ತಪ್ಪಿಗೆ ಓದು ಹೊಣೆಯೆ?

**ಶ್ರೀಕಂಠಯ್ಯ.**—ನಿಜ, ವೆಂಕೂ, ನಿಜ. ನೀನು ಆವೇಲೂ ಹೇಳಿದೆ. "ಏನೋ ಭಯ. ಅತ್ತಿಗೆಮ್ಮ ಒಬ್ಬರೇ ಇದ್ದಾರೆ. ಹೋಗೋಣ. ಅವರು ಹೇಳುವುದನ್ನೂ ಕೇಳಿ ಯಾವುದೊಂದೂ ನಿರ್ಧರಿಸಿ" ಎಂದೆ. ದೇವರೇ ನಿನ್ನ ಬಾಯಿಯಲ್ಲಿ ನುಡಿಸಿದ. ನಾನು ಪಾಪಿ. ದೇವರ ವಾಣಿಯನ್ನು ಕೇಳಲಿಲ್ಲ. ವೆಂಕೂ, ಇವತ್ತಿನ ಸಮಾಜದಲ್ಲಿ ಪೂಜೆ ಸಲ್ಲುವುದು ಹಣಕ್ಕೆ. ಹೆಂಗಸಾಗಲಿ ಗಂಡಸಾಗಲಿ ಧನಿಕರಾಗಿದ್ದರೆ ಸಾಕು. ಅವರಿಗೆ ಶೀಲ ಶುದ್ಧಿಯಿಲ್ಲದಿದ್ದರೂ, ಅವರು ಎಷ್ಟು ಕೆಟ್ಟಗುಣಗಳಿಂದ ತುಂಬಿದ್ದರೂ ಅವರೆದುರಿಗೆ ಹಸಾದಕ್ಕೆ ಹಮ್ಮೈಸಿ ಹಲ್ಲು ಕಿರಿಯುತ್ತೇವೆ. (ಅಳುತ್ತ) ನನ್ನ....ನನ್ನ....ನನ್ನ ಸುಂದರಿಯಂಥ ಅನಾಥೆಯು ಶುದ್ಧಳಾಗಿದ್ದರೂ, ಅವಳನ್ನು ಸಂಶಯ ಪಿಶಾಚಿಗೆ ರಣಬಲಿ ಹೊಡೆಯುತ್ತೇವೆ. ಸುಂದರೀ,....ಸುಂದರೀ....ಎಲ್ಲಿ ಹೋದೆ ಕಂದ?

**ವೆಂಕಮ್ಮ.**—ಅಳಬೇಡಿ. ಸಮಾಧಾನಮಾಡಿಕೊಳ್ಳಿ. (ಮೈದಡವಿ) ನೀರು ಎರಿದು ಕೆಳಕ್ಕೆ ಉರುಳಿಹೋಯಿತು. ನನಗೂ ದುಃಖ.

**ಶ್ರೀಕಂಠಯ್ಯ.**—ನನಗೆ ವಿಷಮ ಸಂಕಟ, ವೆಂಕೂ, ಸುಂದರಿ ತಪಸ್ವಿನಿ ನೋಡು. ಚಿಕ್ಕ ವಯಸ್ಸು, ರೂಪ, ಮಧುರ ಕಂಠ, ಆದರೆ ಗಂಡನಿಲ್ಲ.... ಮನೆಯಲ್ಲಿ, ಮನೆಯಲ್ಲಿ.... ನಾವಿಬ್ಬರೂ ಪ್ರೇಮಲೀಲೆಗಳನ್ನಾಡುವುದನ್ನು ನೋಡಬೇಕು. ಹೊರಗೆ ದಂಪತಿಗಳ ವೈಭವ ವಿಲಾಸಗಳನ್ನು ನೋಡಬೇಕು. ನಮಗಾಗಿ ದುಡಿದು ಬರಬೇಕು. ತನ್ನ ಸಂಪಾದನೆಯನ್ನು ನಮ್ಮ ಸುಖಕ್ಕಾಗಿ ವೆಚ್ಚಮಾಡಿ, ಮನೆಯಲ್ಲಿ ತೊತ್ತಿನಂತೆ ಕೆಲಸಮಾಡಬೇಕು. ನಮ್ಮ ಪ್ರೇಮಾಲಾಪಗಳನ್ನು ಕೇಳಿ, ಅರಳಿದ

ನಮ್ಮ ಮುಖಗಳನ್ನು ನೋಡಬೇಕು. ಇವುಗಳ ಮಧ್ಯದಲ್ಲಿದ್ದೂ ಅವಳು ಪರಿಶುದ್ಧಳಾಗಿದ್ದಳು. ಅವಳು ತಪಸ್ವಿನಿಯಲ್ಲವೆ? ತನ್ನ ದುಃಖವನ್ನು ಮರೆತು ಅಣ್ಣ ಅತ್ತಿಗೆಯರ ಸುಮ್ಮಾನವನ್ನು ನೋಡಿ ಹಿಗ್ಗುತ್ತಿದ್ದಳು. ಅದು ತಪಸ್ಸಲ್ಲವೆ? ಆಗ ನನಗೆ ಈಗಿನ ಬುದ್ಧಿಯಿರಲಿಲ್ಲ.

**ವೆಂಕಮ್ಮ.**—(ನೇಪಥ್ಯದ ಕಡೆಗೆ ನೋಡಿ) ನಮ್ಮ ಶಂಕರು ಬರುತ್ತಿದ್ದಾನೆ. ಸುಮ್ಮನಿರಿ.

**ಶಂಕರ.**—(ಪ್ರವೇಶಿಸಿ) ಅಮ್ಮ, ಅಮ್ಮ, ನೀನೂ ನನಗೆ ಕಾಫಿ ಕೊಟ್ಟು ಕಳಿಸಿದೆ. ಮೂರ್ತಿ ಅಮ್ಮನೂ ಕೊಟ್ಟರು. (ಜೇಬಿನಲ್ಲಿರುವ ತಿಂಡಿಯನ್ನು ತೋರಿಸಿ) ಮೂರ್ತಿ ಅಮ್ಮ ತಿಂಡಿ ಕೊಟ್ಟರು. ಅಮ್ಮಾ! ಮೂರ್ತಿಗೆ ಅತ್ತೆಯುಂತೆ. ಅವರೊಬ್ಬರು ಬಂದರಮ್ಮ. ಅವರೇ ತಿಂಡಿ ತಂದದ್ದು. ಊರಿನಿಂದ ಬಂದರಂತೆ. ನಮ್ಮ ಅತ್ತೆ ಯಾವಾಗಮ್ಮ ನಮ್ಮ ಮನೆಗೆ ಬರೋದು, ನನಗೆ ತಿಂಡಿ ತರೋದು?

**ಶ್ರೀಕಂಠಯ್ಯ.**—ಕಂದ, ಕಂದ, ಕಂದ!

**ವೆಂಕಮ್ಮ.**—ಶಂಕರು, ನೀನು ಜಾಣ. ಇನ್ನು ಕೊಂಚ ಹೊತ್ತು ಮೂರ್ತಿ ಮನೆಗೇ ಹೋಗಿ ಆಡಿಕೊಂಡುಬಾ ಮುತ್ತು. ಹೋಗಮ್ಮ, ನೀನು ಜಾಣ.

**ಶಂಕರ.**—ಆಗಲಮ್ಮ. ನಾನು ಬರೋಹೊತ್ತಿಗೆ ಅತ್ತೇನ ಕರೆ ಕೊಂಡು ಬಂದಿರಬೇಕು. ಅತ್ತೇ ನನಗೆ ತಿಂಡಿ ತಂದಿರಬೇಕು. (ಹೋಗುವನು.)

**ಶ್ರೀಕಂಠಯ್ಯ.**—ಅಯ್ಯೋ! ಊರಿನಿಂದ ಅಣ್ಣ ಬರುವುದಾಗಿ ಬರೆದಿದ್ದ. ಮರೆತೇಬಿಟ್ಟೆ. ರೈಲ್ವೆ ಸ್ಟೇಷನ್ನಿಗೆ ಹೋಗಬೇಕಾಗಿತ್ತು. ಮನೆ ತಿಳಿಯದೆ ಕಷ್ಟವಾಗಿರಬಹುದು. ಇವತ್ತು ಬಂದಿರಲಾರ. ಬಂದಿದ್ದರೆ ಈ ಹೊತ್ತಿಗೆ ಮನೆ ತಲಪಬೇಕಾಗಿತ್ತು.

**ಶೇಷಗಿರಿರಾಯ.**—(ಪ್ರವೇಶಿಸಿ ಮೇಲಕ್ಕೆದ್ದ ಅಳಿಯನನ್ನೂ ಮಗಳನ್ನೂ ನೋಡಿ) ಕೂತುಕೊಳ್ಳಿ, ನಿಮ್ಮಪಾಡಿಗೆ ನೀವು ಕೂತುಕೊಳ್ಳಿ. (ವೆಂಕಮ್ಮನು ಒಳಕ್ಕೆ ಹೋದುದನ್ನು ಕಂಡು ಆ ಕುರ್ಚಿಯನ್ನು ಎಳೆದುಕೊಂಡು ಕುಳಿತು) ಕಂಠೀ!

ನಾಗೇಶ್ವರ ಐಯರ್ ಎಲ್ಲಾ ಹೇಳಿದರು. ನಮ್ಮ ಬುದ್ಧಿ ಮೋಸ ಹೋಯಿತು.

**ಶ್ರೀಕಂಠಯ್ಯ.**—(ನಿಟ್ಟುಸಿರುಬಿಟ್ಟು) ದುರದೃಷ್ಟಕ್ಕೆ ಯಾರು ಹೊಣೆ.

**ಶೇಷಗಿರಿರಾಯ.**—ಇರಲಿ, ವ್ಯಥೆಪಡಬೇಡ. ನಿನಗೆ ತಿಳಿದೇ ಇರಬೇಕಲ್ಲ. ಇವತ್ತು ಮಧ್ಯಾಹ್ನ ನಾಲ್ಕೂಕಾಲು ಗಂಟೆಗೆ ಇಂದಿರಾ ಕುಮಾರಿ ಹರಿಕಥೆಯಂತೆ. ಅಪರೂಪವಾಗಿ ಆಕೆ ಇಲ್ಲಿಗೆ ಬಂದಿದ್ದಾಳೆ. ಒಂದು ಹರಿಕಥೆಗೆ ಆರುನೂರು ರೂಪಾಯಂತೆ, ಕಂಟ್ರಾಕ್ಟು. ಮದರಾಸು ಬೊಂಬಾಯಿ ಪೇಪರುಗಳೆಲ್ಲಾ ಅವಳ ಹರಿಕಥೆ ಕೊಂಡಾಡುತ್ತಲೇ ಬಂದಿವೆ. ಹೋಗೋಣಪ್ಪ. ಅಪರೂಪದ ಸಮಯ, ಇದರಮೇಲೆ ಅನಾಥರಿಗೋಸ್ಕರ ಇವತ್ತಿನ ಹುಟ್ಟುವಳಿಯನ್ನೆಲ್ಲಾ ಕೊಡ್ತಾಳಂತೆ. ಎಷ್ಟು ಧರ್ಮಬುದ್ಧಿ!

**ಶ್ರೀಕಂಠಯ್ಯ.**—ನನ್ನ ಬಾಳಿಗೆ ಹರಿಕಥೆ ಬೇರೆ.

**ಶೇಷಗಿರಿರಾಯ.**—ಹರಿಕಥೆ ಕೇಳಿದರೆ ಸ್ವಲ್ಪಮಟ್ಟಿಗೆ ಮನಸ್ಸು ಶಾಂತವಾಗಿ ದುಃಖ ಸ್ವಲ್ಪ ಸಮಾಧಾನವಾಗುತ್ತೆ. ಇದರ ಮೇಲೆ ಎಲ್ಲೆಲ್ಲೂ ಪ್ರಸಿದ್ಧಳಾಗಿರುವ ಹೆಂಗಸಿನ ಕಥೆ. ಕನ್ನಡ, ತೆಲುಗು, ಹಿಂದಿ, ಮೂರು ಭಾಷೆಯಲ್ಲಿಯೂ ಕಥೆ ಮಾಡುತ್ತಾಳಂತೆ. ಅದ್ಭುತ ಶಕ್ತಿಯಂತೆ. ನಾನು, ನಮ್ಮ ಮನೆಯವಳು, ನೀವಿಬ್ಬರೂ, ಖಂಡಿತ ಹೋಗೋಣ, ಆಕೆ ಯನ್ನು ಅಪರೂಪವಾಗಿ ಕರೆಸಿದ್ದಾರೆ. ಸಮಯಬಿಟ್ಟರೆ ಸಿಕ್ಕುವಹಾಗಿಲ್ಲ. ಇದೇ ಕಡೆಯ ಹರಿಕಥೆಯಂತೆ!

**ವೆಂಕಮ್ಮ.**—(ಕಾಫಿಯ ಗ್ಲಾಸಿನೊಡನೆ ಪ್ರವೇಶಿಸಿ) ಸ್ವಲ್ಪ ಕಾಫಿ.

**ಶೇಷಗಿರಿರಾಯ.**—(ತೆಗೆದುಕೊಂಡು) ಅಬ್ಬ, ಜಸಿ (ಪಾತ್ರೆಯನ್ನು ಕೆಳಗಿಟ್ಟು) ಈ ಬೆಳ್ಳಿ ಪಾತ್ರೆಗಳ ಗೋಳೇ ಹೀಗೆ!

(ತೆರೆಯು ಬೀಳುವುದು.)

---

# ದೃಶ್ಯ ೩

[ಶಿವಾನಂದ ಥಿಯೇಟರಿನಿಂದ ಬರುವ ಮಾರ್ಗ. ಹರಿಕಥೆಯನ್ನು ಕೇಳುವುದಕ್ಕೆ ಹೋಗಿದ್ದವರ ಗುಂಪೊಂದು ಪ್ರವೇಶಿಸುವುದು.]

**ಮೊದಲನೆಯವನು.**—ಅವಳ ಹೆಸರು ಇಂದಿರಾಕುಮಾರಿಯಂತೆ. ನಿಜವಾಗಿ ಲಕ್ಷ್ಮೀದೇವಿಗೆ ಮಗಳಿದ್ದರೆ ಹೀಗೇ ಇರ್ತಿದ್ದಳೆಂತ ಕಾಣುತ್ತೆ. ಅವಳ ಕೆಲವು ಒಡವೆಗಳು, ಅವಳ ಉಟ್ಟಿದ್ದ ಆ ಜರತಾರಿ ಸೀರೆ, ಅವಳ ರೂಪಕ್ಕೆ ಅವು ಅಲಂಕಾರ. ಅವಕ್ಕೆ ಅವಳ ರೂಪ ಅಲಂಕಾರ. ಅವಳಿಗೆ ಅಲಂಕಾರದಲ್ಲಿ ಇಷ್ಟವಿಲ್ಲವೆಂತ ತೋರುತ್ತೆ. ಇಲ್ಲದೆ ಹೋಗಿದ್ದರೆ, ಅಷ್ಟು ಹಣವಿರುವವಳು ಹೀಗಿರುತ್ತಿದ್ದಳೆ?

**ಎರಡನೆಯವನು.**—ಏನು ಕಂಠ, ಏನು ಸಂಗೀತ ಜ್ಞಾನ, ಹರಿಕಥೆ ವೈಖರಿಯೆಷ್ಟು? ಈ ಊರು ಹುಟ್ಟಿದ್ದೇ ಸಾರ್ಥಕವಾಯಿತು.

**ಮೂರನೆಯವನು.**—ಸ್ವಾಮಿ ನರಸಿಂಹರಾಯರು ಬಂದಿದ್ದಾಗ ಶಿವಾನಂದ ಥಿಯೇಟರ್ ಹೀಗೆ ಕಿಕ್ಕಿರಿದು ತುಂಬಿತ್ತಪ್ಪ. ದೋಚಿಕೊಂಡು ಬಿಟ್ಟಳೇ ಮಹಾರಾಯಿತಿ, ಹಣವನ್ನ. ಆದರೂ ಅನಾಥರಿಗೆ ಧರ್ಮಾರ್ಥ ವಾಗಿ ಇದರ ಹುಟ್ಟುವಳಿ ಹೋಗುತ್ತಂತೆ. ಧರ್ಮಬುದ್ಧಿಯೂ ಇದೆ.

**ಮೊದಲನೆಯವನು.**—ಎಷ್ಟು ಶುದ್ಧ ಕನ್ನಡ! ಏನು ಭರ್ಜರಿ ಸಂಸ್ಕೃತ ಶ್ಲೋಕಗಳು! ಮದರಾಸಿನಿಂದ ಬಂದಿದ್ದಾಳೆ. ಅಲ್ಲಿನ ಸ್ಥಳ ದವಳು. ಅವಳಿಗೆ ಹೀಗೆ ಕನ್ನಡ ಬರುವುದು ಆಶ್ಚರ್ಯ.

**ನಾಲ್ಕನೆಯವನು.**—ಅವಳು ಮೈಸೂರು ದೇಶದವಳೇ ಆಗಿದ್ದರೊ? ನಮ್ಮ ಹೆಂಗಸರ ಹಾಗೆಯೇ ಸೀರೆ ಉಟ್ಟಿದ್ದಳು.

**ಮೊದಲನೆಯವನು.**—(ನಕ್ಕು) ಸರಿ. ನಮ್ಮ ದೇಶದವರ ಹಣೆ ಯಲ್ಲೇ ಬರೆದಿಲ್ಲ, ಆ ಸಾಮರ್ಥ್ಯ. ನಮ್ಮ ಸೀಮೆಯವರಿಂದ ಆದೀತೆ ಇಷ್ಟೆಲ್ಲಾ? ಅವಳು ಮದರಾಸಿನವಳಾದುದರಿಂದಲೇ ಮದರಾಸಿನ ಸಾಹುಕಾರ ವಜ್ರದುಂಗರ ಬಹುಮಾನವಾಗಿ ಕೊಟ್ಟ.

**ನಾಲ್ಕನೆಯವನು.**—ಇಲ್ಲಿ ಯಾವುದಕ್ಕಾದರೂ ಪ್ರೋತ್ಸಾಹ ಕೊಟ್ಟರೆತಾನೆ! ಒಬ್ಬರನ್ನ ಕಂಡರೆ ಮತ್ತೊಬ್ಬರಿಗೆ ಹುಳಿಮೋರೆ. ಕುಡಿ ಯಲ್ಲೇ ಚಿಗಟಿಹಾಕೋ ದೇಶ. ಬಳ್ಳಿ ಹಬ್ಬಲಿಲ್ಲನೆಂದರೆ ಪ್ರಯೋಜನವೇನು, ಹೇಳಿ. ಹಬ್ಬಿದ ಬಳ್ಳಿಗಳನ್ನೂ ಹಳಿದು ಹೊರಗಿನ ಬಳ್ಳಿಗಳೆದುರಿಗೆ ಹಲ್ಲು ಬಿಡುವ ಜನ ತುಂಬಿರುವಾಗ?

**ಎರಡನೆಯವನು.**—ನಾನು ಒಪ್ಪಿದೆ, ಈ ಮಾತು. ಮೈಸೂರಿನ ವಳಾಗಿದ್ದರೆ ವಜ್ರದುಂಗುರದ ಬಹುಮಾನಕ್ಕೆ ಅರ್ಹಳಾಗುತ್ತಿರಲಿಲ್ಲವೇನೊ? ಪಾಪ! ಪಾಪ!

**ಮೊದಲನೆಯವನು.**—ನುಮ್ಮನೆ ಒದರಬೇಡಿರಯ್ಯ, ಹುಲಿ ನೋಡಿ ನರಿ ಬರೆ ಹಾಕಿಕೊಂಡಹಾಗೆ. ಯೋಗ್ಯತೆಯಿಲ್ಲದ ನಮ್ಮವರನ್ನ ಹೊಗಳಿದರಾಯಿತೆ?

**ಎರಡನೆಯವನು.**—(ನಗುತ್ತ) ನಿಜ ಸ್ವಾಮಿ! ಶೇಷಣ್ಣನವರು ತಂಜಾವೂರಿನವರು. ವರದಾಚಾರ್ರು ಮಧುರೆಯವರು. ಪಿಟೀಲು ಚೌಡಯ್ಯನವರು ಪಾಲ್ಘಾಟಿನವರು. ತೃಪ್ತಿಯಾಯಿತೆ?

**ನಾಲ್ಕನೆಯವನು.**—ನಿಮ್ಮ ಮಾತಿಗೂ ನಮ್ಮ ಮಾತಿಗೂ ಜವಾ ವಣೆಯಿಲ್ಲ. ಹೋಗಲಿ, ಆವಳು ಯಾವ ದೇಶದವಳಾದರೂ ಆಗಿರಲಿ.

**ಎರಡನೆಯವನು.**—ಸಾವಿತ್ರಿ ಗಂಡನಿಗಾಗಿ ಯಮನೆದುರಿಗೆ ಹಲು ಬಿದ್ದನ್ನ ವರ್ಣಿಸುವಾಗ ಆವಳ ಕಣ್ಣಿನಲ್ಲೂ ನೀರು, ನಮ್ಮ ಕಣ್ಣಿನಲ್ಲೂ ನೀರು.

**ನಾಲ್ಕನೆಯವನು.**—ಅವಳು ತನ್ನ ಹೃದಯದ ಅನುಭವವನ್ನೇ ಹೇಳಿರಬೇಕು. ಆವಳೂ ವಿಧವೆಯೆಂದೇ ತೋರುತ್ತೆ. ಆದಕ್ಕೇ ಸಾದಿಟ್ಟಿದ್ದಳು. ಪತಿಪ್ರೇಮ ಹೇಗೆ ವರ್ಣಿಸಿದಳಪ್ಪ!

**ಶ್ರೀಕಂಠಯ್ಯ.**—(ಪ್ರವೇಶಿಸಿ) ಹರಿಕಥೆ ಮುಗಿದುಹೋಯಿತೆ? ಕಥೆ ಮಾಡಿದವರು ಹೊರಟುಹೋದರೆ?

**ಮೊದಲನೆಯವನು.**—(ನಗುತ್ತ) ಇನ್ನೂ ಇಲ್ಲ ಸ್ವಾಮಿ. ನೀವು ಬರಲೀ ಅಂತ ಕಾದಿದ್ದಾರೆ. (ನಗುತ್ತ) ಆವರು ಆಗಲೇ ಹೊರಟುಹೋದರು.

(ಶ್ರೀಕಂಠಯ್ಯನು ಯೋಚನೆ ಮಾಡುತ್ತ ನಿಲ್ಲುವನು. ಉಳಿದವರೆಲ್ಲರೂ ಹೊರಟು ಹೋಗುವರು. ಅವರುಗಳು ಬಂದಿದ್ದ ಕಡೆಯಿಂದಲೇ ನರಸಿಂಹಯ್ಯನು ಪ್ರವೇಶಿಸುವನು.)

**ನರಸಿಂಹಯ್ಯ.**—ಏನಯ್ಯ, ಹೀಗೆ ಒಬ್ಬನೇ ಯೋಚಿಸುತ್ತ ನಿಂತಿದ್ದೀಯೆ? ಸಂತೋಷಪಡಬೇಕಾದಾಗ ಯೋಚನೆಯೆ? ನಾನೇನೋ ಆನಂದವಾಗಿ ಕಾಲ ಕಳೆದೆನಪ್ಪ. ಗುಮಾಸ್ತಗಿರಿ ನೊಗದ ಭಾರವನ್ನೂ, ಸಂಸಾರ ತಾಪತ್ರಯದ ನೊಗದ ಭಾರವನ್ನೂ ಸ್ವಲ್ಪ ಮರೆಯಬೇಕಾದರೆ ಇಂಥ ಹರಿಕಥೆಗಳು ಬೇಕು. ಏಕಯ್ಯ, ಹೀಗೆ ನಿಂತಿದ್ದೀಯೆ?

**ಶ್ರೀಕಂಠಯ್ಯ.**—ನಾನೂ, ನಮ್ಮ ಮನೆಯವರೂ ಇಲ್ಲಿಗೆ ಬಂದೆವು. ಬರುವ ವೇಳೆಗೇ ಟಿಕೀಟು ಮುಗಿದುಹೋಗಿತ್ತು. ಹರಿಕಥೆಗೆ ಸೊನ್ನೆ ಬಿತ್ತು. ಈಚೆಗೇ ಧ್ವನಿ ಕೇಳಿಸಿತು. ನನಗೆ ನಮ್ಮ ಸುಂದರಿ ಧ್ವನಿ ಹಾಗೆ ತೋರಿತು. ಹತ್ತಿರಕ್ಕೆ ಹೋಗಿ ನೋಡೋಣವೆಂದರೆ ಕಾವಲಿನ ಪೋಲೀಸಿನವರು ಬಿಡಲಿಲ್ಲ. ಜನಗಳು ಹೊರಗೂ ಕಿಕ್ಕಿರಿದು ಟಿಕೀಟು ಬೇಕೆಂತ ಬೊಬ್ಬೆಯಿಡುತ್ತಿದ್ದರು.

**ನರಸಿಂಹಯ್ಯ.**—ಆಯಿತು. ನೀನು ಎಲ್ಲರನ್ನೂ ಕರೆದುಕೊಂಡು ಮನೆಗೆ ಹೋಗಿ ಬಂದೆ, ಇಷ್ಟೇತಾನೆ.

**ಶ್ರೀಕಂಠಯ್ಯ.**—ನೀನು ಯಾವಾಗಲೂ ಒಂದೇ ಹಯವರಟು, ಶುದ್ಧ ಹಯವರಟು. ನನ್ನ ಆಶಯವೇ ತಿಳಿಯಲಿಲ್ಲ.

**ನರಸಿಂಹಯ್ಯ.**—(ಶ್ರೀಕಂಠಯ್ಯನ ಭುಜದ ಮೇಲೆ ಕೈಹಾಕಿ) ತಿಳಿಯಿತಮ್ಮಾ, ಎಲ್ಲಾ ತಿಳಿಯಿತು. ಅವಳು ನಿನ್ನ ತಂಗಿಯಿರಬಹುದೆಂತ ನೀನು ಭ್ರಾಂತಿಪಟ್ಟೆ. ನೋಡುವುದಕ್ಕೆ ಓಡಿಬಂದೆ. ಅಷ್ಟರಲ್ಲಿ ಆ ಹಕ್ಕಿ ಹಾರಿಹೋಗಿದೆ, ಅಷ್ಟೇತಾನೆ.

**ಶ್ರೀಕಂಠಯ್ಯ.**—ಅಯ್ಯಾ, ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣ ಸಂಕಟ. ನನ್ನ ಸಂಕಟವೆಲ್ಲಾ ನಿನಗೆ ತಿಳಿದಿದೆ. ಹೀಗೆ ಮಾತನಾಡುತ್ತೀಯೆ.

**ನರಸಿಂಹಯ್ಯ.**—ಆಕೆಯನ್ನ ನೋಡಿ ನನಗೂ ನಿನ್ನ ತಂಗಿಯೇ ಎಂತ ಭ್ರಾಂತಿ ಬಂತು. ಆದರೆ ಇರಲಾರದಯ್ಯ. ಅವಳ ಹೆಸರು ಸುಂದರಮ್ಮನಲ್ಲವಲ್ಲಾ!

**ಶ್ರೀಕಂಠಯ್ಯ.**—ನಮ್ಮ ತಾಯಿಯ ಹೆಸರು ಇಂದಿರಮ್ಮ. ಇವಳ ಹೆಸರು ಇಂದಿರಾಕುಮಾರಿ. ಏನೋ ಆಶೆ. ಹೊಳೆಯಲ್ಲಿ ಮುಳುಗಿ ಹೋಗುವವನು ಜೊಂಡು ಹುಲ್ಲನ್ನು ಹಿಡಿದು ದಡಕ್ಕೆ ಬರುವ ಭ್ರಮೆ. ಮಧ್ಯಾಹ್ನ ನಮ್ಮ ತಂದೆಯೂ ಬಂದರು. ಮೋಟಾರು ಬಸ್ಸಿನಲ್ಲಿ ಬಂದರು. ಅವರ ಗೋಳಾಟ ಹೇಳಲಾಗದು. ಇಂದಿರಾಕುಮಾರಿಯು ನಮ್ಮ ಸುಂದರಿಯೇ ಆಗಿದ್ದರೆ!

**ನರಸಿಂಹಯ್ಯ.**—ಆಕೆಯನ್ನು ನೋಡಿ ನನಗೂ ಸಂಶಯವಾಯಿತು. ಆದರೂ ನಿರ್ಧರವಾಗಿ ಹೇಳುವಂತಿಲ್ಲ. ನಾನೂ ಕುತೂಹಲಪಟ್ಟು ಮನೆ ವಿಚಾರಿಸಿದೆ. ಕಿಲಾರಿ ರಸ್ತೆಯಲ್ಲಿ ಆ ದೊಡ್ಡ ಮನೆಯಿದೆ ನೋಡು. ಆ ದಿನ "ಬಾಡಿಗ್ಗೆ ದೊರೆಯಲ್ಪಡುತ್ತೆ" ಎಂತ ಬೋರ್ಡು ಹಾಕಿದ್ದ ಆ ಖಾಲಿ ಮನೆ, ಅಲ್ಲಿ ಇಳಿದಿದ್ದಾರಂತೆ, ಆ ಮನೆ ಬಾಡಿಗೆಗೆ ತೆಗೆದುಕೊಂಡು.

**ಶ್ರೀಕಂಠಯ್ಯ.**—(ಸಂತೋಷ ಕುತೂಹಲಗಳಿಂದ) ಹಾಗಾದರೆ ಹೋಗಿ ವಿಚಾರಿಸುತ್ತೇನೆ. (ಹೊರಡಲನುವಾಗುವನು.)

**ನರಸಿಂಹಯ್ಯ.**— (ಅವನನ್ನು ತಡೆದು) ಲೋ, ಮಂಗಮುಸುಡಿ. ಅವಿವೇಕವಾದೀತು....ಯೋಚಿಸಿ ನೋಡು. ಆಕೆಯೇನಾದರೂ ನಿನ್ನ ತಂಗಿಯಲ್ಲದೆ ಇದ್ದು, ಅಪಹಾಸ್ಯಕ್ಕೆ ಗುರಿಯಾದೀಯೆ. ಒಬ್ಬನೇ ಹೋಗಬೇಡ. ನಿಮ್ಮ ಗೃಹಿಣಿ, ನಿಮ್ಮ ಆಕೆ, ಅವರೊಡನೆ ಹೋಗು. ಆಗ ನಿರ್ಭಯ. ಆಕೆಯೊಡನೆ ಮಾತನಾಡಲು ನಿಮ್ಮವರಿರುತ್ತಾರೆ.

**ಶ್ರೀಕಂಠಯ್ಯ.**—ಒಳ್ಳೆಯ ಸಲಹೆ. ಅವಳೇ ನಮ್ಮ ಸುಂದರಿಯಾಗಿರಬಾರದೆ! ಹೋಗೋಣ.

(ಇಬ್ಬರೂ ಗುಂಪು ಹೋದ ಕಡೆಗೆ ಹೋಗುವರು.)

---

## ದೃಶ್ಯ ೪

[ಸುಂದರಿ (ಇಂದಿರಾಕುಮಾರಿ)ಯು ಇಳಿದಿರುವ ಮನೆಯೊಳಗಿನ ಒಂದು ಭಾಗ. ಗೋಡೆಯಮೇಲೆ ನಟರಾಜನ ಪಟವೂ, ವೇಣುಗೋಪಾಲನ ಪಟವೂ, ಸರಸ್ವತಿಯ ಪಟವೂ ಇರುವುವು. ರಂಗಸ್ಥಳದ ಮಧ್ಯದಲ್ಲಿ ಒಂದು ಕರಿಯ ಮರದ ಮೇಜು, ಅದರ ಹಿಂದೆ ಮೆತ್ತೆಯ ಕುರ್ಚಿ. ಮೇಜಿನಮೇಲೆ ಅಚ್ಚಬಿಳಿಯ ಬಟ್ಟೆಯು ಹಾಸಿರುವುದು. ಅದರ ಮುಂದೆ ಎರಡು ಪಾರ್ಶ್ವಗಳಿಗೂ ಸೋಫಾ ಮುಂತಾದ ಆಸನಗಳಿರುವುವು. ನೆಲಕ್ಕೆ ಉತ್ತಮವಾದ ಜಮಖಾನ ಹಾಸಿರುವುದು. ರಂಗಸ್ಥಳದ ಮುಂಭಾಗದಲ್ಲಿ ಒಂದು ಕಡೆಗೆ ನಿಲುಗನ್ನಡಿ. ಅದರ ಬಳಿಯಲ್ಲಿ ಒಂದು ಸ್ಟೂಲು. ಅದರ ಮೇಲೆ "ಮೆತ್ತೆ" ಯೂ ಅದರ ಮೇಲೆ ಕನ್ನಡಿಯ ಆಸರೆಯಿಂದ ನಿಂತಿರುವ ತಂಬೂರಿಯೂ ಇರುವುವು. ಕೆಲವು ಆಭರಣಗಳನ್ನೂ, ಜರತಾರಿ ಅಂಚಿನ ಕರಿಯ ರೇಷ್ಮೆಯ ಸೀರೆಯನ್ನೂ ಬಿಳಿಯ ಬಣ್ಣದ ಕುಪ್ಪಸವನ್ನೂ ಧರಿಸಿ ಸುಂದರಿಯು ಪ್ರವೇಶಿಸುವಳು. ಅವಳ ಹಣೆಯಲ್ಲಿ ಸಾದಿನ ಬಟ್ಟು ಇರುವುದು. ಅವಳು ಕೈಯಲ್ಲಿ ಹೂಮಾಲೆಯನ್ನು ಹಿಡಿದು ಪ್ರವೇಶಿಸುವಳು. ಅವಳು "ನನ್ನು ಪಾಲಿಂಪ ನಡಚಿ ವಚ್ಚಿತಿವೋ, ನಾಪ್ರಾಣನಾಥ" ಎಂಬ ಮಾಟನ್ನು ಮೆಲ್ಲಗೆ ಹಾಡಿಕೊಳ್ಳುತ್ತ ಮೇಜಿನ ಬಳಿಗೆ ಹೋಗುವಳು, ಅವಳ ಸೇವಕಿ ಜಾನಕಿಯು ಒಂದು ಶಾಲನ್ನೂ, ಕುರಾಯಿಯನ್ನೂ ಹಿಡಿದು ಪ್ರವೇಶಿಸಿ, ಒಡತಿಯು ತನ್ನ ಕೈಗೆ ಕೊಟ್ಟ ಹೂವಿನ ಹಾರವನ್ನು ತೆಗೆದುಕೊಂಡು ಒಳಕ್ಕೆ ಹೋಗುವಳು.]

**ಸುಂದರಿ.**—ಜಾನಕಿ, ಜಾನಕಿ. (ಜಾನಕಿಯು ಬಂದ ಮೇಲೆ) ಉಡುಪಿ ಹೋಟಲಿಗೆ ಹೋಗಿ ಊಟವನ್ನು ತೆಗೆಸಿಕೊಂಡು ಬಾರಮ್ಮ. (ಜಾನಕಿಯು ಹಿಂದೆ ತಾನೂ ಹೋಗಿ ಬಾಗಿಲು ಚಿಲಕಹಾಕಿ ಮತ್ತೆ ಪ್ರವೇಶಿಸಿ) ಪ್ರಾಣೇಶ್ವರ! ಇದೆಲ್ಲವೂ ನಿನ್ನ ಸೇವೆ. ಅನಸೂ! ನಿನ್ನ ಸುಂದರಿ ಇಂದಿರಾಕುಮಾರಿ ಯೆಂದು ಹೆಸರಿಟ್ಟುಕೊಂಡು ಈ ಬೆಂಗಳೂರಿಗೇ ಬಂದಿದ್ದಾಳಮ್ಮ. (ಕನ್ನಡಿಯ ಬಳಿಗೆ ಹೋಗಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡು) ಪ್ರಾಣೇಶ್ವರ! ಈ ಅಲಂಕಾರ ವನ್ನು ನೀನು ನೋಡಿದ್ದರೆ! (ನಿಟ್ಟುಸಿರುಬಿಟ್ಟು) ಇದು ಶವಕ್ಕೆ ಮಾಡಿರುವ ಶೃಂಗಾರ. ನೀನು ಇದನ್ನು ನೋಡಿದ್ದರೆ ಇದು ದೇಹದ ಶೃಂಗಾರ ವಾಗುತ್ತಿತ್ತು. (ತಂಬೂರಿಯನ್ನು ನೋಡಿ) ಜಾನಕಿಗೆ ಬುದ್ಧಿಯಿಲ್ಲ. ಹೀಗಿಟ್ಟಿದ್ದಾಳಲ್ಲ. (ತಂಬೂರಿಯನ್ನು ಮಿಾಟಿ, ಕಾಯಿ ಬಳಿ ಕಿವಿಯೊಡ್ಡಿ) ಏನು ನಾದ! ತಂಬೂರಿಯೆಲ್ಲ ನಾದದಿಂದ ತುಂಬಿಹೋಗಿದೆ. ತಂಬೂರಿಯೇ ಮೈವುರೆತಂತೆ ತೋರುತ್ತಿದೆ. ಪ್ರಾಣೇಶ್ವರ, ನೀನೊಂದುಸಲ "ಸುಂದರಾ" ಎಂದು ಕರೆದರೆ (ತನ್ನ ದೇಹವನ್ನು ಅಂಗೈಯಿಂದ ಮುಟ್ಟಿಕೊಂಡು) ಈ ತಂಬೂ

ರಿಯೂ ನಾದದಿಂದ ತುಂಬಿ ಹೀಗೇ ಮೈಮರೆಯುತ್ತಿತ್ತು. (ಬಾಗಿಲು ತಟ್ಟಿದ ಶಬ್ದವನ್ನು ಕೇಳಿ, ಹೋಗಿ ಬಾಗಿಲು ತೆಗೆದು ಮತ್ತೆ ಪ್ರವೇಶಿಸುವಳು. ಅವಳ ಹಿಂದೆ ಒಂದು ದೊಡ್ಡ ತಸ್ವೀರನ್ನು ಕೈಯಲ್ಲಿ ಹಿಡಿದು ಫೋಟೋಗ್ರಾಫರು ಪ್ರವೇಶಿಸುವನು.) ಈ ದಿನವೇ ಸಿದ್ಧವಾಯಿತೆ?

**ಫೋಟೋಗ್ರಾಫರು.**—ಇಲ್ಲಿ ನಾಸೊಬ್ಬ ದೊಡ್ಡಮನುಷ್ಯ ಸಿದ್ದೇಸಂತ ಮಡರಾಸಿನಿಂದ ಕಳುಹಿಸಿದ್ದೀರಿ. ಉದಾರವಾಗಿ ಹಣ ಕೊಟ್ಟಿದ್ದೀರಿ. ಈ ದಿನ ಇಲ್ಲಿಗೆ ಒರುವುದಾಗಿಯೂ ಬರೆದಿದ್ದಿರಿ. ಪೂರ್ತಿ ಮಾಡದೆ ಉಂಟೆ?

**ಸುಂದರಿ.**—(ಕಣ್ಣೊರಸಿಕೊಂಡು) ಅವರು ಬೆಂಗಳೂರಿನಲ್ಲಿದ್ದಾಗ ಆ ಫೋಟೋ ತೆಗೆದಿದ್ದವರು ನೀವು. ನೀವೇ "ಎನ್‌ಲಾರ್ಜ್" ಮಾಡಿಕೊಡಬೇಕೆಂತ ಆಶೆಯಾಯಿತು. ಅವರನ್ನು ನೋಡದೆ ಇದ್ದ ಇತರರ ಕೈಯಲ್ಲಿ ಕೊಟ್ಟರೆ ಕೆಟ್ಟುಹೋಗಬಹುದು, ನೋಡಿ. (ಪಟವನ್ನು ತೆಗೆದುಕೊಳ್ಳುವಳು.)

**ಫೋಟೋಗ್ರಾಫರ್.**—ನಾನು ಚಿಲ್ಲರೆ ಆರು ರೂಪಾಯಿ, ಕೊಡಬೇಕು. ತೆಗೆದುಕೊಳ್ಳಿ. (ಜೇಬಿಗೆ ಕೈಹಾಕುವನು.)

**ಸುಂದರಿ.**—ಏನೂ ಬೇಡಿ. ಬಹು ಚೆನ್ನಾಗಿ ಕೆಲಸಮಾಡಿದ್ದೀರಿ. ಚಿಲ್ಲರೆ ಕೊಡಬೇಕಿಲ್ಲ.

**ಫೋಟೋಗ್ರಾಫರ್.**—ಕಲೆಯ ಬೆಲೆ ಎಲ್ಲರಿಗೂ ಹೀಗೆ ತಿಳಿದಿದ್ದರೆ, ನಾವೆಲ್ಲ ಕುಬೇರರಾಗುತ್ತಿದ್ದೆವು........ತಾಯಿ. ತಮ್ಮ ಫೋಟೋವನ್ನೂ "ಎನ್‌ಲಾರ್ಜ್" ಮಾಡಿಸಿದರೆ, ಅದರ ಬಳಿಯಿಡಲು ಸರಿಹೋಗುತ್ತೆ ನೋಡಿ. ಬಲಕ್ಕಿಟ್ಟರೆ ಬಹು ಚೆನ್ನಾಗಿರುತ್ತೆ.

**ಸುಂದರಿ.**—ಆಗಲಿ, ನೋಡೋಣ. (ಅವನು ಕೈಮುಗಿದು ಹೊರಡಲನುವಾಗುವನು. ಸುಂದರಿಯು ಪಟವನ್ನು ನೋಡುತ್ತ ಮೈಮರೆತು ಸ್ವಪ್ನ ಪ್ರಪಂಚದಲ್ಲಿರುವವಳಂತೆ) ನೀವು ಹೊರಡಿ. (ಅವನು ಹೋಗುವನು.) ಈ ದೇಹಕ್ಕೆ ಚಿತ್ರಪಟವನ್ನು ದೊಡ್ಡದು ಮಾಡಿಸಿಕೊಂಡು ಹಿಗ್ಗುವ ವೈಭವ ವಿಲಾಸಗಳೂ ಬೇಕೆ? ಪಾಪ, ಅವನೇನು ಬಲ್ಲ. (ಚಿತ್ರವನ್ನು ದೃಷ್ಟಿಸಿ ನೋಡಿ ಒಂದೆರಡು ಕ್ಷಣ ಚಿಂತಿಸಿ) ಎಲ್ಲಿಹೋದೆ, ನನ್ನ ಪ್ರಭು?...."ಸುಂದರಾ, ನನ್ನನ್ನು ಏಕ

ವಚನದಲ್ಲಿ ಕರೆಯೆ!" ಎನ್ನುತ್ತಿದ್ದವನು ಎಲ್ಲಿ ಹೋದೆ? ನೀನು ನಮ್ಮ ದೇಶದ ವಿಧವೆಯರ ಕಷ್ಟಗಳನ್ನು ಬಣ್ಣಿಸುತ್ತಿದ್ದೆ. ಅವುಗಳನ್ನೆಲ್ಲಾ ನಾನೇ ಅನುಭವಿಸಿದೆ. ಅನಾಥ ವಿಧವೆಯರಿಗಾಗಿ ಒಂದು ಆಶ್ರಮವನ್ನು ಸ್ಥಾಪಿಸಿ ಆಶ್ರಯಕೊಟ್ಟು ಅವರನ್ನುದ್ಧರಿಸಬೇಕೆಂಬ ಒಂದು ಸಂಕಲ್ಪದಿಂದ ಬದುಕಿದ್ದೇನೆ. ಪ್ರಪಂಚವೇ ನನಗೆ ಶೂನ್ಯವಾಗಿದೆ. (ಪಟವನ್ನು ನೋಡಿ ನೋಡಿ ಹಿಗ್ಗಿ) ಇಲ್ಲ, ಇಲ್ಲ, ಇಲ್ಲ, ಇಲ್ಲ, ನಿನ್ನ ಈ ಮುದ್ದು ಮುಖವನ್ನು ಕಂಡ ನನಗೆ ಎಲ್ಲ ಭಾಗ್ಯವೂ ಈಗ ಒಂದಂತಾಯಿತು. ಇದನ್ನು ಕೇಳು ದೊರೆಯೆ! ಇದನ್ನು ಕೇಳಿ ನೀನೆಷ್ಟು ಸಂತೋಷಪಡುತ್ತಿದ್ದೆ. ಹಾಡು ತ್ತೇನೆ ಕೇಳು. ("ನನ್ನು ಪಾಲಿಂಪ...." ಎಂಬ ಕೃತಿಯನ್ನು ಹಾಡಿ) ಇದರ ರಾಗವೂ ಮೋಹನ. ನೀನೂ ನನ್ನ ಮೋಹನ. ನಾನು ಸಂಪತ್ತಿನ ಮಧ್ಯದಲ್ಲಿದ್ದೂ ಒಡವೆಯಾಗಿದ್ದೆ. ನಿರ್ಗತಿಕಳಾದ ಒಡವೆಯಾಗಿದ್ದೆ. ನೀನು ನನಗೆ ದೊರೆತೆ. ಇನ್ನು ನಾನು ಒಡವೆಯಲ್ಲ. ಪುರಂದರದಾಸರ ಕೀರ್ತನೆ ನನಗೇ ಅನ್ವಯಿಸುವಂತಿದೆ. ವ್ಯತ್ಯಾಸಮಾಡಿ ಹಾಡುತ್ತೇನೆ. ಇವತ್ತು ಅದನ್ನು ಮೂರುಸಲ ಹಾಡಿಸಿದರು. ನೀನು ಕೇಳು, ಪ್ರಾಣೇಶ್ವರ. ನೀನು ಕೇಳಿದರೇ ನನಗೆ ತೃಪ್ತಿ. (ಪುರಂದರದಾಸರ ಕೀರ್ತನೆಯನ್ನು ವ್ಯತ್ಯಾಸ ಮಾಡಿ "ನಾನೇಕೆ ಬಡವೆ ಪ್ರಿಯಾ, ನೀನಿರಲಾಗಿ" ಎಂದು ಮುಂತಾಗಿ ಹಾಡಿ, ಪಟವನ್ನು ಮೇಜಿನಮೇಲಿಟ್ಟು, ದೃಷ್ಟಿಸಿ ನೋಡುತ್ತ ಕುರ್ಚಿಯಮೇಲೆ ಕುಳಿತುಕೊಳ್ಳುವಳು.)

**ಜಾನಕಿ.**—(ಸುಂದರಿಯ ಹಿಂದೆ ಪ್ರವೇಶಿಸಿ, ಅವಳಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ) ನಾನು ಆಗಲೇ ಬಂದೆ. ಬಾಗಿಲು ಸಂದಿಯಿಂದ ಎಲ್ಲಾ ನೋಡಿದೆ. ನಿಮ್ಮ ಸೇವೆ ನನಗೆ ಶಾಶ್ವತವಾಗಿರಲಿ. ಊಟ ಈಗಲೇ ತರುತ್ತಾರೆ. ನೀವು ಮಾತ್ರ ಹೀಗೆ ಶುದ್ಧವಾಗಿದ್ದೀರಿ. ನನ್ನ ಮಾತ್ರ ಮದುವೆ ಮಾಡಿ ಕೊಳ್ಳಬೇಕೆಂದು ಹೇಳುತ್ತೀರಿ.

**ಸುಂದರಿ.**—ಹೀಗೇಕೆ ನಮಸ್ಕಾರ ಮಾಡಿದೆ? ಹುಚ್ಚಿಯಾಗ ಬೇಡಮ್ಮ, ಸುಮ್ಮನಿರೆ. ನಿನಗೆ ನಾನು, ನನಗೆ ನೀನು. (ಜಾನಕಿಯನ್ನು ಪ್ರೀತಿಯಿಂದ ತಲೆಸವರಿ) ನೀನು ಬಾಲವಿಧವೆ. ನೀನು ಸಂಸಾರಸುಖವನ್ನೇ ಕಂಡವಳಲ್ಲ. ಅದಕ್ಕಾಗಿ ಹೇಳಿದೆ. ಅಷ್ಟೇ. ನೀನೂ ನನ್ನ ಹಾಗೆಯೇ

ಇದ್ದರೆ ಪರಮ ಸಂತೋಷ, ಪರಮ ಸಂತೋಷ. ಪತಿಯಂಥ ಪೂಜ್ಯವಸ್ತು ಮತ್ತೊಂದಿಲ್ಲ. ನಾವಿಬ್ಬರೂ ಹತಭಾಗ್ಯರು, ಜಾನಕಿ; ಜಾನಕಿ, ನಾನು ಅಲ್ಪಕಾಲ—ಒಂದು ಸ್ವಪ್ನದಂತಾದರೂ—ಸಂಸಾರಸುಖವನ್ನನುಭವಿಸಿದೆ. ನೀನು ಆ ಭಾಗ್ಯವನ್ನೂ ಕಂಡಿಲ್ಲ. ನೀನು ಮತ್ತೆ ಮದುವೆಮಾಡಿಕೊಳ್ಳಮ್ಮ.

**ಜಾನಕಿ.**—ನನಗೆ ಮದುವೆಯೆ?

**ಸುಂದರಿ.**—ನಿನಗೆ ಮದುವೆ. ಹೌದು ಜಾನಕಿ, ನಿನಗೆ ಮದುವೆ. ಬಾಲವಿಧವೆಯರಿಗೆ ವಿವಾಹವಾದರೆ ತಪ್ಪಿಲ್ಲ. ಅದರಿಂದ ಭಗವಂತನು ಸುಪ್ರೀತನಾಗುವನು. ನನಗೆ ಅದರಿಂದ ಬಹಳ ಸಂತೋಷ....ಜಾನಕಿ, ನಾನೊಬ್ಬಳು ಅನಾಥೆ....ನೀನೆ ನನಗೆ ದಿಕ್ಕಾದ ತಂಗಿ.

**ವೆಂಕಮ್ಮ.**—(ಪ್ರವೇಶಿಸಿ ಸುಂದರಿಯನ್ನು ನೋಡಿ ಅಳುತ್ತ). ಅತ್ತಿಗೆಮ್ಮ, ಅತ್ತಿಗೆಮ್ಮ, (ಸುಂದರಿಯನ್ನಾಲಿಂಗಿಸಿ ಅವಳ ಭುಜದಮೇಲೆ ತಲೆಯಿಟ್ಟು ರೋದಿಸಿ) ಕ್ಷಮಿಸಿ. ನಾವು ಪಾಪಿಗಳು; ಕ್ಷಮಿಸಿ.

**ರಾಮರಾಯ.**—(ಪ್ರವೇಶಿಸಿ ಗದ್ಗದ ಧ್ವನಿಯಿಂದ) ನೀನು ಅನಾಥೆಯಲ್ಲ, ಕಂದ; ನಾನಿನ್ನೂ ಬದುಕಿದ್ದೇನಮ್ಮ. ನಮ್ಮೆಲ್ಲರಿಗೂ ಬುದ್ಧಿ ಬಂದಿದೆ ತಾಯಿ. ಕ್ಷಮಿಸು. ನಾನು ಈ ದಿನ ಬೆಂಗಳೂರಿಗೆ ಬಂದದ್ದೇ ಸಾರ್ಥಕವಾಯಿತು.

**ಶ್ರೀಕಂಠಯ್ಯ.**—(ಪ್ರವೇಶಿಸಿ) ಸುಂದರೀ, ನೀನು ನಿರಪರಾಧಿನಿ. ನನ್ನಮ್ಮ. ನಾವೆಲ್ಲರೂ ಪಾಪಿಗಳು. ನಿನ್ನ ಕಾಲಿಗೆ ಬೇಕಾದರೂ ಬೀಳುವೆನು ಕ್ಷಮಿಸು. ಆ ಪಾಪಿ ಕುಂಭಕೋಣಂ ಎಲ್ಲವನ್ನೂ ತಾನೇ ಬೊಗಳಿದ. (ಶಂಕರನು ಪ್ರವೇಶಿಸಿ ಅಪ್ರತಿಭನಾಗಿ ನಿಲ್ಲುವನು.)

**ಸುಂದರಿ.**—ಅತ್ತಿಗೆ ಸುಮ್ಮನಿರು. ಅಣ್ಣಾ! ನೀನು ದೊಡ್ಡವನು. ಹಾಗೆನ್ನಬೇಡ. ಕರಿ! ಮತ್ತೊಂದು ಸಲ ನಿನ್ನ ಕಂಠೀ ಅಂತ ಕರೆಯುವ ಭಾಗ್ಯ ಕಂಡೆನೆ? (ಅಳುವಳು.)

**ಶಂಕರ.**—ಅಣ್ಣಾ, ಯಾರಣ್ಣಾ, ಇವಳು?

**ಶ್ರೀಕಂಠಯ್ಯ.**—ನಿಮ್ಮ ಅತ್ತೆಯಪ್ಪ; ಬೆಳಗ್ಗೆ ನೀನು ಕೇಳಿದ್ದೆ.

**ಶಂಕರ.**—(ಚಪ್ಪಾಳೆ ಹೊಡೆದು) ಅತ್ತೆ, ಅತ್ತೆ, ಬಂದೇ ಬಿಟ್ಟಳೆ? ಕರಿಸೇಬಿಟ್ಟೆಯೋ? ಇವಳು ತಿಂಡಿ ತಂದಿಲ್ಲ. ಮೂರ್ತಿ ಅಮ್ಮ, ಮೂರ್ತಿ ಅತ್ತೇನ ತಬ್ಬಿಕೊಳ್ಳಲಿಲ್ಲ. ಅಮ್ಮ ಏಕೆ ಹೀಗೆ ಮಾಡಿದ್ದು?

**ಸುಂದರಿ.**—(ಓಡಿಬಂದು ಶಂಕರನನ್ನೆತ್ತಿ ತಬ್ಬಿಕೊಂಡು ಮುತ್ತಿಟ್ಟು) ನನ್ನ ಮುತ್ತು, ನನ್ನ ಪಚ್ಚೆ, ನನ್ನ ಬಂಗಾರ....ಜಾನಕಿ, ಮಧ್ಯಾಹ್ನ ತಟ್ಟೆಯಲ್ಲಿಟ್ಟಿದ್ದ ತಿಂಡಿಯನ್ನೆಲ್ಲಾ ತಾರೆ. (ಜಾನಕಿಯು ಹೋಗಿ ತರುವಳು.) ತಿನ್ನು ಮಗು. (ಇಳಿಸುವಳು.)

**ಶಂಕರ.**—(ತಟ್ಟೆಯನ್ನು ತೆಗೆದುಕೊಂಡು ಹಿಗ್ಗುತ್ತ) ತುಂಬ ತಿಂಡಿ, ತುಂಬ ತಿಂಡಿ. ಒಳ್ಳೇ ಅತ್ತೆ. ಮೂರ್ತಿ ಅತ್ತೆಗಿಂತ ಒಳ್ಳೇ ಅತ್ತೆ. ಮೂರ್ತಿ ಅತ್ತೆ ನನ್ನ ಹೀಗೆ ಮುದ್ದಿಸಲೇ ಇಲ್ಲ. ಒಳ್ಳೆ ಅತ್ತೆ. (ನಗುವನು.)

(ಎಲ್ಲರೂ ನಗುವರು.)

**ಸುಂದರಿ.**—ಅಣ್ಣಾ! ಊರಿನಲ್ಲಿ ಎಲ್ಲರೂ ಕ್ಷೇಮವೇನಣ್ಣಾ. ಕಂಠೀ! ಮೂರ್ವಾಡಿ ಸಾಲ ತೀರಿಸಿ ನೀನೂ ವೆಚ್ಚಮಾಡಿಕೊಳ್ಳುವುದಕ್ಕೆ ನಾನು ಮನಿಯಾರ್ಡರು ಕಳುಹಿಸಿದ್ದೆ. ನೀನು ಹಣ ತೆಗೆದುಕೊಳ್ಳಲಿಲ್ಲ. ನೀನು ಮನಿಯಾರ್ಡರು ವಾಪಸು ಮಾಡಿದ ಮೇಲೆ ನನ್ನ ಮನಸ್ಸು ಕಲ್ಲು ಮಾಡಿಕೊಂಡು ಸುಮ್ಮನಾದೆ. ಅಪ್ಪನಿಗೆ ಕಳುಹಿಸಿದರೂ ಇದೇ ಗತಿಯಾದೀತೆಂತ ಸುಮ್ಮನಾದೆ.

**ಶ್ರೀಕಂಠಯ್ಯ.**—ನೀನು ಹೆಸರು ಬದಲಾಯಿಸಿಕೊಂಡಿದ್ದು ತಿಳಿಯದೆ ಯಾರದೋ ಮನಿಯಾರ್ಡರೆಂತ ವಾಪಸುಮಾಡಿದೆವು.

**ವೆಂಕಮ್ಮ.**—ಆ ತಪ್ಪು ನನ್ನದು. ಮನಿಯಾರ್ಡರ್ ಬಂದಾಗ ಇವರು ಮನೆಯಲ್ಲಿರಲಿಲ್ಲ. ಇಂದಿರಾಕುಮಾರಿಯೆಂಬ ಸ್ನೇಹಿತಗಾತಿ ಯಾರೋ ಕಳುಹಿಸಿದ್ದಾಳೆ ಅಂತ ನನ್ನ ಮೈ ಚಿಟುಗುಟ್ಟಿಹೋಯಿತು. ಯಜಮಾನರು ವಾಪಸು ಕಳುಹಿಸಹೇಳಿದ್ದಾರೆ ಅಂತ ಹೇಳಿದೆ.

**ಶ್ರೀಕಂಠಯ್ಯ.**—ಆಮೇಲೆ ಬಹಳ ದಿನದ ಮೇಲೆ ಬಾಯಿಬಿಟ್ಟಳು. ನನ್ನ ಜೀವ ಹಿಂಡಿಬಿಟ್ಟಳು.

**ವೆಂಕಮ್ಮ.**—ಅವತ್ತು ಇವರೊಡನೆ "ಮನೆಗೆ ಹಿಂತಿರುಗೋಣ. ಅತ್ತಿಗೆಮ್ಮ ಒಬ್ಬರೇ ಇದ್ದಾರೆ" ಅಂತ ಬಾಯಿ ಬಾಯಿ ಬಿಟ್ಟೆ. ಇವರು ಕೇಳಲಿಲ್ಲ.

**ಸುಂದರಿ.**—ಎಲ್ಲಾ ನಮ್ಮ ಒಳ್ಳೆಯದಕ್ಕೇ ದೇವರು ಮಾಡ್ತಾನಮ್ಮ. ನಮ್ಮ ಚಿಕ್ಕಮ್ಮ—ನಮ್ಮ ತಾಯಿ ತಂಗಿ—ಮದರಾಸಿನಲ್ಲಿದ್ದಳು. ಅವಳ ಆಶ್ರಯಪಡೆಯೋಣವೆಂತ ಹೋದೆ. ನನಗೆ ಅಮ್ಮನಿಲ್ಲ. ಚಿಕ್ಕಮ್ಮನಿಗೆ ಮಕ್ಕಳಿಲ್ಲ. ತುಂಬ ಪ್ರೀತಿಸಿ ಆದರಿಸಿದಳು. ಅಲ್ಲಿ ವಿದ್ಯಾಭ್ಯಾಸ ಮಾಡಿ, ಅವಳು ಹೇಳಿದಂತೆ ಈ ಹರಿಕಥೆ ದಾರಿ ಹಿಡಿದೆ.

**ಶ್ರೀಕಂಠಯ್ಯ.**—ಸುಂದರಿ! ಇದನ್ನು ಕೇಳಿ ಸಂಕಟವಾಗುತ್ತಮ್ಮ. ನಾವೆಲ್ಲರೂ ನಿನ್ನ ಭಾಗಕ್ಕೆ ಪೀಡೆಗಳಾಗಿ ಪರಿಣಮಿಸಿದೆವು. ಅವಳಾದರೂ ಸಹಾಯಮಾಡಿ ಕಾಪಾಡಿದಳಲ್ಲ. ಮಡಿಹೆಂಗಸಾಗಿದ್ದೂ ಕರುಣ ತೋರಿಸಿದಳಲ್ಲ.

**ಸುಂದರಿ.**—ಮಡಿಹೆಂಗಸರೆಲ್ಲಾ ಕೆಟ್ಟವರೆಂದು ಭಾವಿಸಬೇಡ, ಕಂಠಿ. ಮಡಿಹೆಂಗಸರಲ್ಲಿ ಎಷ್ಟೆಷ್ಟೋ ಒಳ್ಳೆಯವರೂ ಇದ್ದಾರೆ. ಚಿಕ್ಕಮ್ಮನೂ ವಿಧವೆಯಾಗಿ ಸಮಾಜದ ಹಿಂಸೆಯ ಸುಳಿಯಲ್ಲಿ ಸಿಕ್ಕಿ ಸೇಚಾಡಿದವಳೇ. ದುಃಖದ ಬೇಗೆಯಲ್ಲಿ ಪುಟಹಾಕಿದ ಮನಸ್ಸು ಅಪರಂಜಿಯಾಗುತ್ತಪ್ಪ. ಚಿಕ್ಕಪ್ಪನ ಆಸ್ತಿಯ ಅವಲಂಬನ ಅವಳಿಗಿರುವ ಹೊತ್ತಿಗೆ ಅವಳು ಪರಾಧೀನವಿಲ್ಲದೆ ಪಾರಾದಳು. ನೀನು ಅಜ್ಜಿಯ ವಿಷಯದಲ್ಲಿ ಚುಚ್ಚಿ ಮಾತನಾಡಿದ್ದರೆ ಅದೂ ತಪ್ಪು. ಯಾವುದೂ ಅಜ್ಜಿಯ ತಪ್ಪಲ್ಲ. ಸಮಾಜದ ಪದ್ಧತಿಗಳ ತಪ್ಪು. ಅವಳು ಬೆಳೆದ ವಾತಾವರಣವೇ ಎಲ್ಲಕ್ಕೂ ಹೊಣೆ.

**ಶ್ರೀಕಂಠಯ್ಯ.**—ನಮ್ಮ ಸಮಾಜದಲ್ಲಿ ವಿಧವೆಯರ ಪಾಡು ನಾಯಿ ಪಾಡು. ಅವರಿಗೆ ಬಹಳ ಕಷ್ಟ.

**ಸುಂದರಿ.**—ಅದು ಕಷ್ಟವೆಂದು ಹೇಳಿ, ಕನಿಕರಪಟ್ಟು, ದೂರ ನಿಂತರೆ ಪ್ರಯೋಜನವೇನು ಕಂಠಿ? ಕನಿಕರವಿದ್ದರೆ ಕಾರ್ಯದಲ್ಲಿ ತೋರಿಸ ಬೇಕು. ಆ ಕಷ್ಟವನ್ನು ಕಡಮೆ ಮಾಡಲು ಪ್ರಯತ್ನ ಮಾಡಬೇಕು. ಅದಕ್ಕೆ ಧೈರ್ಯ ಬೇಕು. ಸಮಾಜಕ್ಕೆ ಸಹಾಯವಾಗಬೇಕಾದರೆ ಆ ಧೈರ್ಯವಿರುವವರಿಂದಲೇ. ಅದು ಆದಷ್ಟು ಕಡಮೆಯಾಗುವಂತೆ ಮಾಡ ಬೇಕು ಕಂಠಿ. ಚಿಕ್ಕಮ್ಮನ ಹೃದಯ ಎಷ್ಟು ವಿಶಾಲವೋ ನೋಡು. ಬಾಲವಿಧವೆಯರು ಮತ್ತೆ ಮದುವೆಯಾಗುವುದೂ ಅವಳಿಗೆ ಸಮ್ಮತ. ಅವಳೇನೋ ಬೆಂಕಿಯಂತೆ ಪರಿಶುದ್ಧಳಾಗಿದ್ದರೂ, ಪಾಪ ಮಾಡಿದ ವಿಧವೆಯರಲ್ಲಿಯೂ ಅವಳಿಗೆ ಮರುಕ.

**ಶ್ರೀಕಂಠಯ್ಯ.**—ವಿಧವಾ ವಿವಾಹ ಪಾಪವೆಂದು ಹೇಳುತ್ತಾರಲ್ಲ.

**ಸುಂದರಿ.**—ತಮ್ಮದು ಯಾವ ತಪ್ಪೂ ಇಲ್ಲದೆ ಸಂಸಾರ ಸುಖದಿಂದ ವಂಚಿತೆಯರಾಗಿ ಪಾಡು ಪಡುವ ಬಾಲವಿಧವೆಯರ ಗೋಳು ಒಂದಲ್ಲ, ಹತ್ತು ಬ್ರಹ್ಮಾಂಡಗಳನ್ನೂ ಭೇದಿಸಿಕೊಂಡು ಹೋಗು ವಷ್ಟಿದೆ. ಅದು ವೈದಿಕರೆಲ್ಲರಿಗೂ ತಿಳಿದೀತೆ? ಮಗಳೋ, ತಂಗಿಯೋ, ಸೊಸೆಯೋ, ಬಾಲವಿಧವೆಯಾಗಿರುವ ವೈದಿಕರಿಗೆ ಮಾತ್ರವೇ ಅದು ಗೊತ್ತು. ಮಾತೆತ್ತಿದರೆ ಪಾಪ, ಪಾಪ, ಪಾಪವೆನ್ನುತಾರೆ. ಮನುಸ್ಮೃತಿ ಯನ್ನೋ ಪರಾಶರಸ್ಮೃತಿಯನ್ನೋ ಮುಂದಿಟ್ಟುಕೊಂಡು ವೈದಿಕರೇ ಪರೀಕ್ಷಿಸಿ ನೋಡಲಿ. ಪವಿತ್ರವಾದ ಬ್ರಾಹ್ಮಣ ಧರ್ಮ ಎಷ್ಟು ಜನ ಉಳಿಸಿಕೊಂಡಿದ್ದಾರೋ ಅವರೇ ಯೋಚಿಸಲಿ. ಆಮೇಲೆ ವಿಧವಾ ವಿವಾಹ ಪಾಪವೆಂದು ಹೇಳಲಿ. ಅಲ್ಲಿಯವರೆಗೂ ಬೇಡ. ವಿಧವಾ ವಿವಾಹ ಪಾಪ ವೆಂದು ಎಲ್ಲಿಯೂ ಹೇಳಿಲ್ಲ. ಹೋಗಲಿ. ಆಪದ್ಧರ್ಮದಂತೆ ಬಾಲ ವಿಧವೆಯರಿಗಾದರೂ ಅವರು ಕರುಣವನ್ನು ತೋರಿಸಬಾರದೆ?

**ಶ್ರೀಕಂಠಯ್ಯ.**—ನಿನ್ನ ಅಭಿಪ್ರಾಯವೇನು ಸುಂದರಿ?

**ಸುಂದರಿ.**—ಅಭಿಪ್ರಾಯ ಹೇಳೋಕೆ ನಾನೇನು ಅಷ್ಟು ದೊಡ್ಡ ವಸ್ತುವಲ್ಲ. ಕಂಠೀ! ಗಂಡಸರಿಗೆ ಎರಡನೆ ಮದುವೆಯನ್ನೇ ತಪ್ಪಿಸಿ ಬಿಡಬೇಕು. ಅದಿಲ್ಲವೋ ಇಷ್ಟಪಡುವ ವಿಧವೆಯರೂ ಮತ್ತೆ ಮದುವೆ ಯಾಗಲು ಗಂಡಸರಂತೆಯೇ ಅವರಿಗೂ ಅವಕಾಶವಿರಬೇಕು. ಅವಕಾಶವಿದ್ದ

ಮಾತ್ರವೇ ಎಲ್ಲರೂ ಮದುವೆಯಾಗುವುದಿಲ್ಲ. ಚಿಕ್ಕಮ್ಮ ಸಮಾಜ ಪರಿಷ್ಕರಣದ ಊರಾದ ಮದರಾಸಿನಲ್ಲಿಯೇ ಇದ್ದು ಎರಡನೇ ಮದುವೆ ಮಾಡಿಕೊಂಡಳೆ?

**ಶ್ರೀಕಂಠಯ್ಯ.**—ಚಿಕ್ಕಮ್ಮನನ್ನು ನೋಡಿಕೊಂಡು ಬರಬೇಕು.

**ಸುಂದರಿ.**—ಅವಳನ್ನ ನೋಡುವ ಭಾಗ್ಯ ಇನ್ನು ನಮಗಿಲ್ಲಪ್ಪ. ಅವಳ ಜೀವನದ ಯಾತ್ರೆ ಮುಗಿಯಿತು. ನಾನು ಮಾನವಾಗಿದ್ದು ಹಣ ಸಂಪಾದಿಸಿದ್ದೇನೆ, ಕಂಠಿ. ನೀವು ತಲೆತಗ್ಗಿಸುವಂತೆ ಮಾಡಿಲ್ಲ.

**ಶ್ರೀಕಂಠಯ್ಯ.**—ಅಯ್ಯೋ! ಚಿಕ್ಕಮ್ಮ ಹೋಗಿಬಿಟ್ಟಳೆ?......

**ರಾಮರಾಯ.**—(ನಿಟ್ಟುಸಿರು ಬಿಟ್ಟು) ಗೌರಮ್ಮ ಹೋಗಿಬಿಟ್ಟಳೆ? ....ಅಯ್ಯೋ. ಒಳ್ಳೆಯವರಿಗೆ ಇದೆಲ್ಲಿ ಕಾಲ? ನನ್ನಂಥ ಪಾಪಿಗಳಿಗೇ ದೀರ್ಘಾಯುಸ್ಸು.

**ಸುಂದರಿ.**—ಅಣ್ಣಾ ನಿನ್ನ ಧರ್ಮಕ್ಕೆ ಹಾಗೆನ್ನಬೇಡಣ್ಣಾ. ನೀವೆಲ್ಲರೂ ಸುಖವಾಗಿರಿ. ಊರಿನಲ್ಲಿ ಎಲ್ಲರನ್ನೂ ನೋಡಿಯೇನೇ ಅನ್ನಿಸಿದೆ. ಅಜ್ಜಿ, ಚಿಕ್ಕಮ್ಮ, ಮಾವ, ಅತ್ತೆ, ವಿಶಾಲು, ರಂಗು, ಎಲ್ಲರನ್ನೂ ನೋಡಬೇಕು. ಎಲ್ಲರೂ ಸುಖವಾಗಿರಿ.

**ಶ್ರೀಕಂಠಯ್ಯ.**—ನೀನು, ನೀನು!

**ಸುಂದರಿ.**—ನಿಮ್ಮ ಸುಖ ನೋಡಿ ನಾನೂ ಸುಖಿ, ಅಷ್ಟೇ. ಇನ್ನು ಮೇಲೆ ನಿಮಗೆ ಯಾರಿಗೂ ದುಡ್ಡಿನ ಕಷ್ಟಬೇಡ. ನನ್ನ ನೇವೆ ಕಾದಿದೆ. ನನ್ನಲ್ಲಿ ಸಮೃದ್ಧಿಯಾಗಿ ಹಣವಿದೆ.

**ಶ್ರೀಕಂಠಯ್ಯ.**—ನಮ್ಮ ಕಷ್ಟ ಸುಖ ಹಾಗಿರಲಮ್ಮ. ನಿನ್ನ ಹಣವನ್ನೆಲ್ಲಾ ಒಳ್ಳೆಯ ಕೆಲಸಗಳಿಗೆ ವಿನಿಯೋಗಿಸಮ್ಮ.

**ಸುಂದರಿ.**—ಕಂಠೀ, ನಿನ್ನ ಸ್ನೇಹಿತ ಗೋವಿಂದಯ್ಯನೆಂಬಾತನೊಬ್ಬ ನಿದ್ದ ನೋಡು—ಬಾಲವಿಧವೆಯರ ಕಷ್ಟ ವರ್ಣಿಸಿ ನಿನ್ನ ಜೊತೆಯವ ರೊಡನೆ ವಾದಿಸಿ ಹಾಸ್ಯಮಾಡಿಸಿಕೊಳ್ಳುತ್ತಿದ್ದವನು—ಅವನೆಲ್ಲಿದ್ದಾನೆ ಈಗ?

**ಶ್ರೀಕಂಠಯ್ಯ.**—ಗೋವಿಂದಯ್ಯನೇ! ಈ ಊರಿನಲ್ಲೇ ಅಡ್ವೊಕೇಟಾಗಿದ್ದಾನೆ. ಅವನು ಮದುವೆಯೇ ಮಾಡಿಕೊಂಡಿಲ್ಲ.

**ಸುಂದರಿ.**—ಅವನು ಚಿಪ್ಪುಗೈದಾದರೆ, . . . . ಜಾನಕಿಗೆ. . . . ಅವನು . . . . ತಕ್ಕ ವರ.

**ಶ್ರೀಕಂಠಯ್ಯ.**—ಅಲ್ಲಿಗೆ ಅವನ ಸಂಕಲ್ಪವೂ ಈಡೇರುವ ಸಮಯ ಒದಗಿದೆ.

**ವೆಂಕಮ್ಮ.**—ಶಂಕರು, ತಿಂಡಿ ತಿಂದದ್ದು ಸಾಕು. ಅತ್ತೆಗೆ ನಮಸ್ಕಾರಮಾಡಪ್ಪ.

**ಸುಂದರಿ.**—(ನಮಸ್ಕರಿಸಿದ ಮಗುವನ್ನು ಮೇಲಕ್ಕೆತ್ತಿ) ಅದೃಷ್ಟವಂತನಾಗಿ ಚಿರಕಾಲ ಬಾಳಪ್ಪ. (ಮುತ್ತಿಟ್ಟು) ಕಂಠೀ! ನಿಮಗೆ ಎಲ್ಲಾ ತಿಳಿದ ಬಗೆ ಹೇಗೆ? ಅತ್ತಿಗೆ, ಮಗು ಎಷ್ಟು ಮುದ್ದಾಗಿದ್ದಾನೆಯೇ? ಶಂಕರು! ಇನ್ನು ಮೇಲೆ ನಾನೂ ನೀನೂ ಜೊತೆ.

**ಶ್ರೀಕಂಠಯ್ಯ.**—ಈಗ ಆ ಹಿಂದಿನ ಸುದ್ದಿ ಬೇಡ. ಆ ಕುಂಭಕೋಣಂಗೆ ಪ್ಲೇಗು ತಗಲಿದೆ. ಇ. ಡಿ. ಆಸ್ಪತ್ರೆಯಲ್ಲಿದ್ದಾನೆ. ಅವನೇ ನನ್ನ ಕರೆಸಿ ಎಲ್ಲಾ ಹೇಳಿಕೊಂಡು ಪೇಚಾಡಿ ಗೋಳಾಡಿದ.

**ಸುಂದರಿ.**—ಅವನ ಹೆಂಡತಿ ನನ್ನ ಮಾನ ಉಳಿಸಿ ಕಾಪಾಡಿದರು. ಅವರಿಗೋಸ್ಕರವಾದರೂ ಅವನು ಬದುಕಿರಲಿ. ಅವನಿಗೆ ಬೇಕಾದರೂ ಸಹಾಯಮಾಡೋಣ. ಯಾವುದು ಪಾಪವೋ, ಯಾರದು ಪಾಪವೋ, ಅದನ್ನು ದೇವರಿಗೆ ಬಿಡೋಣ. ವಿಶ್ವಪ್ರೇಮವೊಂದು ನಮಗಿರಲಿ. ಕಂಠಿ! ಬಡವಿಧವೆಯರಿಗಾಗಿ ಆಶ್ರಮ ಏರ್ಪಡಿಸೋಣ.

**ರಾಮರಾಯ.**—ಎಷ್ಟು ಗುಣವಂತೆಯಮ್ಮಾ ನೀನು!

**ಶ್ರೀಕಂಠಯ್ಯ.**—ನೀನು ದೇವಿ, ಮಾನವಿಯಲ್ಲ.

**ಸುಂದರಿ.**—ಹಾಗೆನ್ನಬೇಡ. ಎಲ್ಲಾ ಅಮ್ಮನ ಆಶೀರ್ವಾದ. ನಿಮ್ಮ ಭಾವನ ಸೇವೆ. ನಾನೊಬ್ಬಳು ಹತಭಾಗ್ಯೆ. ಭಾರತಮಾತೆಯೊಬ್ಬಳೇ ದೇವಿ. ಅವಳ ಸೇವೆಯಿಂದ ನಮ್ಮ ಜನ್ಮವೇ ಸಾರ್ಥಕ. ("ವಂದೇಮಾತರಂ . . " ಎಂಬ ಗೀತೆಯನ್ನು ಹಾಡುವರು. ತೆರೆಯು ಬೀಳುವುದು.)

**ಸಂಪೂರ್ಣ**

402-34 — ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸುಪರಿಂಟೆಂಡೆಂಟಾದ
ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿಸಲ್ಪಟ್ಟಿತು.